# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಡಿಸೆಂಬರ್ ೧೦, ೨೦೧೫ (ಮಾರ್ಗಶಿರ ೧೯, ಶಕ ವರ್ಷ ೧೯೩೭)<br>Bengaluru, Thursday, December 10, 2015 (Margashira 19, Shaka Varsha 1937) | ಸಂಚಿಕೆ ೪೯<br>Issue 49 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ನಡವಳಿಗಳು ಬೆಂಗಳೂರು.

**ವಿಷಯ :** **ಈ ಇಲಾಖೆಯ ಅಧೀಕ್ಷಕರ ವೃಂದದ ನೌಕರರುಗಳಿಗೆ ಆಡಳಿತಾಧಿಕಾರಿ ವೃಂದಕ್ಕೆ ಬಡ್ತಿ ನೀಡುವ ಬಗ್ಗೆ.**

**ಉಲ್ಲೇಖ :**
1. ಇಲಾಖಾ ಮುಂಬಡ್ತಿ ಸಮಿತಿ ಸಭೆಯ ನಡವಳಿ ದಿ: 03.07.2015.
2. ಸರ್ಕಾರದ ಪತ್ರ ಸಂಖ್ಯೆ: ಒಇ 5 ಪಿಪಿಇ 2015, ದಿ: 28.07.2015.
3. ಸಂಬಂಧಪಟ್ಟ ಇತರೇ ಕಾಗದ ಪತ್ರಗಳು.

**ಪ್ರಸ್ತಾವನೆ :**

ದಿನಾಂಕ: 03.07.2015 ರಂದು ಜರುಗಿದ ಇಲಾಖಾ ಬಡ್ತಿ ಸಮಿತಿ ಸಭೆಯಲ್ಲಿ ಈ ಕೆಳಕಂಡ ಅಧೀಕ್ಷಕರುಗಳ ಬಡ್ತಿ ಬಗ್ಗೆ ಪರಿಶೀಲಿಸಿ, ಆಡಳಿತಾಧಿಕಾರಿ ಹುದ್ದೆಗೆ ಬಡ್ತಿ ನೀಡುವ ಬಗ್ಗೆ ನಿರ್ಣಯಿಸಿ, ಸದರಿ ಸಭೆಯ ನಿರ್ಣಯವನ್ನು ಅನುಮೋದಿಸುವಂತೆ ಹಾಗೂ ಇಲಾಖಾ ಮುಂಬಡ್ತಿ ಸಭೆಯಲ್ಲಿ ಬಡ್ತಿ ನೀಡಲು ನಿರ್ಣಯಿಸಿರುವ ಅಧೀಕ್ಷಕರ ಸ್ಥಳ ನಿಯುಕ್ತಿ ಬಗ್ಗೆ ಪ್ರಸ್ತಾವನೆಯನ್ನು ಸಹ ಸರ್ಕಾರದ ಅನುಮೋದನೆಗಾಗಿ ಸಲ್ಲಿಸಿದ್ದು, ದಿನಾಂಕ 28.07.2015ರ ಸರ್ಕಾರದ ಪತ್ರದಲ್ಲಿ ಸದರಿ ಪ್ರಸ್ತಾವನೆಗೆ ಅನುಮತಿಯನ್ನು ನೀಡಲಾಗಿರುತ್ತದೆ. ಹಾಗೂ ಬೆಂಗಳೂರಿನಲ್ಲಿ ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ಕಲ್ಪಿಸಿರುವ ಮೀಸಲಾತಿಯಲ್ಲಿ ಒಂದು ಹುದ್ದೆ ಮೀಸಲಾಗಿದ್ದು, ಯಾವುದೇ ಅಭ್ಯರ್ಥಿ ಲಭ್ಯವಾಗದಿದ್ದಲ್ಲಿ ಆ ಹುದ್ದೆಯನ್ನು ಭರ್ತಿ ಮಾಡದೇ ಹಾಗೇ ಉಳಿಸಿಕೊಳ್ಳುವಂತೆ ಸೂಚಿಸಲಾಗಿರುತ್ತದೆ. ಆದ್ದರಿಂದ ಸರ್ಕಾರದ ಸೂಚನೆಯಂತೆ ಕೆಳಕಂಡ ನೌಕರರಿಗೆ ಆಡಳಿತಾಧಿಕಾರಿ ಹುದ್ದೆಗೆ ಬಡ್ತಿ ನೀಡಿ, ಸ್ಥಳ ನಿಯುಕ್ತಿಗೊಳಿಸುವ ಬಗ್ಗೆ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ : ಡಿಪಿಎನ್/ಸಿಶಾ-2/229/2014-15, ದಿನಾಂಕ : 29ನೇ ಜುಲೈ, 2015.**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ, ಈ ಕೆಳಕಂಡ ಅಂಕಣ (2) ರಲ್ಲಿ ನಮೂದಿಸಿರುವ ಅಧೀಕ್ಷಕರುಗಳಿಗೆ (ವೇತನ ಶ್ರೇಣಿ ₹. 20000-36300) **ತಕ್ಷಣದಿಂದ ಜಾರಿಗೆ ಬರುವಂತೆ ಆಡಳಿತಾಧಿಕಾರಿ ಹುದ್ದೆಗೆ ಬಡ್ತಿ ನೀಡಿ, ವೇತನ ಶ್ರೇಣಿ** ₹. 21600-600-24600-700-28800-800-33600-900-39000-1050-40050 ರಲ್ಲಿ ಸ್ಥಾನಪನ್ನ ಅವಧಿಯ ಮೇಲೆ ಅಂಕಣ (3) ರಲ್ಲಿ ನಮೂದಿಸಿರುವ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ.

| ಕ್ರ.ಸಂ | ನೌಕರರ ಹೆಸರು, ಪದನಾಮ ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಕಛೇರಿ ಮತ್ತು ಸ್ಥಳ ಶ್ರೀಯುತರು | ಮುಂಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ |
|---|---|---|
| 01 | 02 | 03 |
| 1 | ಜೆ. ಮಧುಸೂಧನ, ಅಧೀಕ್ಷಕರು,<br>ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ,<br>**ಬೆಂಗಳೂರು.** | ಆಡಳಿತಾಧಿಕಾರಿ,<br>ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ,<br>**ಬೆಂಗಳೂರು.**<br>(ಖಾಲಿ ಇರುವ ಹುದ್ದೆಗೆ) |

| ಕ್ರ.ಸಂ | ನೌಕರರ ಹೆಸರು, ಪದನಾಮ ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಕಛೇರಿ ಮತ್ತು ಸ್ಥಳ ಶ್ರೀಯುತರು | ಮುಂಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ |
|---|---|---|
| 01 | 02 | 03 |
| 2 | ಎಸ್.ಎಂ. ನಾಗರಾಜ್, ಅಧೀಕ್ಷಕರು,<br>ಸರ್ಕಾರಿ ಅಭಿಯೋಜಕರ ಕಛೇರಿ.<br>**ಹಾವೇರಿ.** | ಆಡಳಿತಾಧಿಕಾರಿ,<br>ಸರ್ಕಾರಿ ಅಭಿಯೋಜಕರ ಕಛೇರಿ,<br>**ಬೆಂಗಳೂರು ನಗರ.**<br>(ಖಾಲಿ ಇರುವ ಹುದ್ದೆಗೆ) |
| 3 | ವೈ.ಐ. ಗುರಾಣಿ,<br>ಅಧೀಕ್ಷಕರು.<br>ಸರ್ಕಾರಿ ಅಭಿಯೋಜಕರ ಕಛೇರಿ.<br>**ಬಾಗಲಕೋಟೆ.** | ಆಡಳಿತಾಧಿಕಾರಿ,<br>ಕಾನೂನು ಅಧಿಕಾರಿ (ಹಿರಿಯ) ರವರ ಕಛೇರಿ, ಬೆಳಗಾವಿ ವಿಭಾಗ,<br>**ಬೆಳಗಾವಿ.**<br>(ಖಾಲಿ ಇರುವ ಹುದ್ದೆಗೆ) |
| 4 | ಕೆ. ವೆಂಕಟೇಶ್,<br>ಅಧೀಕ್ಷಕರು,<br>ಸರ್ಕಾರಿ ಅಭಿಯೋಜಕರ ಕಛೇರಿ,<br>**ಮೈಸೂರು.** | ಆಡಳಿತಾಧಿಕಾರಿ,<br>ಕಾನೂನು ಅಧಿಕಾರಿ (ಹಿರಿಯ) ರವರ ಕಛೇರಿ,<br>**ಬೆಂಗಳೂರು.**<br>(ಖಾಲಿ ಇರುವ ಹುದ್ದೆಗೆ) |
| 5 | ಇ. ನಾಗರಾಜ್,<br>ಅಧೀಕ್ಷಕರು.<br>ಸರ್ಕಾರಿ ಅಭಿಯೋಜಕರ ಕಛೇರಿ,<br>**ಚಿತ್ರದುರ್ಗ** | ಆಡಳಿತಾಧಿಕಾರಿ,<br>ಕಾನೂನು ಅಧಿಕಾರಿ (ಹಿರಿಯ) ರವರ ಕಛೇರಿ,<br>ಬೆಂಗಳೂರು ನಗರ ವಿಭಾಗ.<br>**ಬೆಂಗಳೂರು.**<br>(ಖಾಲಿ ಇರುವ ಹುದ್ದೆಗೆ) |

ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ಕಲ್ಪಿಸಿರುವ ಮೀಸಲಾತಿ ಅನ್ವಯ ಒಂದು ಹುದ್ದೆಯನ್ನು ಬೆಂಗಳೂರಿನಲ್ಲಿ ಮೀಸಲಿರಿಸಿರುವ ಹಿನ್ನೆಲೆಯಲ್ಲಿ, ಕ್ರ.ಸಂ. 5 ರಲ್ಲಿನ ನೌಕರರ ಬಡ್ತಿ ಆದೇಶವು ದಿನಾಂಕ 01/08/2015 ರಿಂದ ಜಾರಿಗೆ ಬರುತ್ತದೆ.

ಅಂಕಣ (2) ರಲ್ಲಿ ಸೂಚಿಸಿರುವ ಕಛೇರಿ ಮುಖ್ಯಸ್ಥರು ನೌಕರರನ್ನು ತಕ್ಷಣ ಕರ್ತವ್ಯದಿಂದ ಬಿಡುಗಡೆ ಮಾಡುವುದು. ಅಂಕಣ (3) ರಲ್ಲಿ ನಮೂದಿಸಿರುವ ಕಛೇರಿ ಮುಖ್ಯಸ್ಥರು ಸದರಿ ನೌಕರರು ಬಡ್ತಿ ಹೊಂದಿದ ಸ್ಥಳದಲ್ಲಿ ವರದಿ ಮಾಡಿಕೊಂಡ ಬಗ್ಗೆ ತಕ್ಷಣ ಈ ಕಛೇರಿಗೆ ವರದಿಯನ್ನು ಸಲ್ಲಿಸಲು ಸೂಚಿಸಲಾಗಿದೆ.

**P.R. 911**
**S.C. 5**

**ಕೆ. ರಾಮಣ್ಣ,**
ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, (ಪ್ರಭಾರ),
ಬೆಂಗಳೂರು.

## ಸಾರಿಗೆ ಇಲಾಖೆ

### ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರ ನಡವಳಿಗಳು.

**ಉಪಸ್ಥಿತರು:** ಶ್ರೀ ಗುರುಮೂರ್ತಿ, ಕುಲಕರ್ಣಿ ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ

**ವಿಷಯ :** ವಾಹನ ಕ್ರಮಾಂಕ ಕೆಎ 15/3015 ರ ನೋಂದಣಿ, ನೋಂದಣಿ ಮತ್ತು ನೋಂದಣಿ ಪತ್ರ ರದ್ದು ಪಡಿಸುವ ಬಗ್ಗೆ.

**ಉಲ್ಲೇಖ :**
1. ಶ್ರೀಮತಿ ವಾಣಿ ಎಂ.ಎಸ್. ಕೋಂ. ಎಂ.ಆರ್.ಸತೀಶ್, ಮೆ:ಎಂ.ಎನ್.ಪಿಕಲ್ ಇಂಡಸ್ಟ್ರೀಸ್, ಶಿರಾಳಕೊಪ್ಪ ರವರ ಅರ್ಜಿ ದಿನಾಂಕ : 19-08-15
2. ಮೋ.ವಾ. ನೀ.ರವರ ವರದಿ ದಿ: 24-9-2015

**ಪ್ರಸ್ತಾವನೆ :**

ವಾಹನ ಮಾಲೀಕರಾದ ಶ್ರೀಮತಿ ವಾಣಿ ಎಂ.ಎಸ್, ಕೋಂ ಎಂ.ಆರ್.ಸತೀಶ್, ಮೆ.ಎಂ.ಎನ್. ಪಿಕಲ್ ಇಂಡಸ್ಟ್ರೀಸ್, ಶಿರಾಳಕೊಪ್ಪರವರು ತಮ್ಮ ವಾಹನ ಕ್ರಮಾಂಕ ಕೆಎ 15/3015(ಎಲ್.ಜಿ.ವಿ) ವಾಹನವು ಸಾರ್ವಜನಿಕರ ರಸ್ತೆಯಲ್ಲಿ ಸಂಚರಿಸಲು ಸಾಧ್ಯವಿರದ ಕಾರಣ ಸದರೀ ವಾಹನದ ನೋಂದಣಿ ರದ್ದತಿ ಬಗ್ಗೆ ಈ ಕಛೇರಿಯಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಅಂತೆಯೇ ಈ ಕಛೇರಿಯ ಮೋ.ವಾ.ನೀ. ರವರು ಸದರೀ ವಾಹನವನ್ನು ತಪಾಸಣೆ ಮಾಡಿ ವಾಹನವು ಸಾರ್ವಜನಿಕರ ರಸ್ತೆಯಲ್ಲಿ ಸಂಚರಿಸಲು ಯೋಗ್ಯವಿಲ್ಲದ ಕಾರಣ ವಾಹನದ ನೋಂದಣಿ ರದ್ದತಿ ಬಗ್ಗೆ ಶಿಫಾರಸ್ಸು ಮಾಡಿರುತ್ತಾರೆ. ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ವಾಹನ ಮಾಲೀಕರು ಸದರೀ ವಾಹನವನ್ನು ದುರಸ್ತಿ ಮಾಡಿಸಿ ರಸ್ತೆಗೆ ತರಬಾರದೆಂಬ ಷರತ್ತಿನ ಮೇರೆಗೆ ವಾಹನ ಕ್ರಮಾಂಕ ಕೆಎ 15/3015 (ಎಲ್.ಜಿ.ವಿ) ವಾಹನದ ನೋಂದಣಿ ಹಾಗೂ ನೋಂದಣಿ ಪತ್ರ ಇವುಗಳನ್ನು ರದ್ದುಗೊಳಿಸಲು ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ .ಸಪ್ರಾಸಾಅ/ಸಾಗರ/ಆರ್‌ಜಿಎನ್/ಕೆಎ15/3015 (ಎಲ್.ಜಿ.ವಿ.) 15–16/ ದಿನಾಂಕ 24–9–2015.**

ಮೋಟಾರು ವಾಹನ ಕಾಯಿದೆ 1988ರ ವಿಧಿ 55 (1)ರ ಅಡಿಯಲ್ಲಿ ಗುರುಮೂರ್ತಿ ಕುಲಕರ್ಣಿ ಹೆಚ್. ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಆದ ನಾನು ಮೋಟಾರು ವಾಹನ ಕಾಯ್ದೆ ಹಾಗೂ ವಿಧಿಗಳಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿ ವಾಹನ ಕ್ರಮಾಂಕ ಕೆಎ15/3015 (ಎಲ್.ಜಿ.ವಿ) ಇದರ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಮುಂದೆ ಸರ್ಕಾರಕ್ಕೆ ಸದರೀ ವಾಹನದಿಂದ ಬರಬೇಕಾದ ಬಾಕಿಗಳು ಇದ್ದಲ್ಲಿ ವಾಹನ ಮಾಲೀಕರೇ ಪಾವತಿಸಬೇಕೆಂಬ ಷರತ್ತಿನ ಮೇರೆಗೆ ದಿ: 24–9–2015 ರಿಂದ ಜಾರಿಗೆ ಬರುವಂತೆ ರದ್ದು ಪಡಿಸಿರುತ್ತೇನೆ.

**ವಾಹನದ ವಿವರ**

| | | |
|---|---|---|
| 1. | ವಾಹನ ಕ್ರಮಾಂಕ | ಕೆಎ 5/3015 |
| 2. | ವಾಹನ ವರ್ಗ | ಎಲ್.ಜಿ.ವಿ. |
| 3. | ತಯಾರಿಕಾ ವರ್ಷ | 2004 ಫೆಬ್ರವರಿ |
| 4. | ಛಾಸೀ ನಂಬರ್ | ST91–IN 621718 |
| 5. | ಇಂಜಿನ್ ನಂಬರ್ | F8BIN 2675740 |
| 6. | ಆಸನ ಸಾಮರ್ಥ್ಯ | 1+1 |
| 7. | ಮಾಲೀಕರ ಹೆಸರು, ವಿಳಾಸ | ಶ್ರೀಮತಿ ಎಂ.ಎಸ್. ವಾಣಿ, ಕೋಂ ಎಂ.ಆರ್. ಸತೀಶ್, ಮೆ.ಎಂ.ಎಸ್, ಪಿಕಲ್ಸ್ ಇಂಡಸ್ಟ್ರೀಸ್, ಶಿರಾಳಕೊಪ್ಪ. |

ಪ್ರತಿಯನ್ನು ರಾಜ್ಯದ ಎಲ್ಲಾ ಪ್ರಾದೇಶಿಕ/ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಮಾಹಿತಿಗಾಗಿ ಸಲ್ಲಿಸಿದೆ.

P.R. 912 ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ

S.C. 5 ಸಾಗರ, ಶಿವಮೊಗ್ಗ ಜಿಲ್ಲೆ.

**ಒಳಾಡಳಿತ ಸಚಿವಾಲಯ**

**ಅಧಿಕೃತ ಜ್ಞಾಪನ**

**ಸಂಖ್ಯೆ ಒಇ 18 ಪಿಪಿಇ 2015, ಬೆಂಗಳೂರು, ದಿನಾಂಕ: 31.07.2015.**

**ವಿಷಯ :** ದಿನಾಂಕ: 01.01.2015ರಲ್ಲಿದ್ದಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸರ್ಕಾರಿ ಅಭಿಯೋಜಕರು/ಕಾನೂನು ಅಧಿಕಾರಿ (ಹಿರಿಯ) ವೃಂದದ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ :**
1. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಸಂಖ್ಯೆ: ಡಿಪಿಎನ್/ಸಿಶಾ/1/01/ 256/ 2014–15, ದಿನಾಂಕ 02–03–2015.
2. ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಮಸಂಖ್ಯೆ ದಿನಾಂಕ 12–05–2015.

ದಿನಾಂಕ: 01.01.2015ರಲ್ಲಿದ್ದಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸರ್ಕಾರಿ ಅಭಿಯೋಜಕರು/ಕಾನೂನು ಅಧಿಕಾರಿ (ಹಿರಿಯ) ವೃಂದದ ಅಧಿಕಾರಿಯ ಜ್ಯೇಷ್ಠತಾ ಪಟ್ಟಿಯನ್ನು ಇದರೊಂದಿಗೆ ಲಗತ್ತಿಸಿ ಪ್ರಕಟಿಸಲಾಗಿದೆ.

**ದೇವೇಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
(ಪೊಲೀಸ್ ಸೇವೆಗಳು–ಬಿ)

**ದಿನಾಂಕ: 01.01.2015 ರಲ್ಲಿದ್ದಂತೆ ಸರ್ಕಾರಿ ಅಭಿಯೋಜಕರು /ಕಾನೂನು ಅಧಿಕಾರಿ (ಹಿರಿಯ) ವೃಂದದ ಜ್ಯೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಹೆಸರು ಶ್ರೀ/ ಶ್ರೀಮತಿ | ನೇರ ನೇಮಕಾತಿ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿ ಜ್ಯೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| **01** | **02** | **03** | **04** | **05** | **06** | **07** |
| 1 | ಎಂ.ವಿ. ಭಟಪನ್ನೆ | ಮುಂಬಡ್ತಿ | 27.06.1955 | 10.02.1984 | 25.01.2007 (ಒಇ519 ಪಿಪಿಇ 2005) | 12.11.2004 (ಪೂರ್ವಾನ್ವಯ) |

| 01 | 02 | 03 | 04 | 05 | 06 | 07 |
|---|---|---|---|---|---|---|
| 2 | ಬೆಳಕ್ಕಿ ನಿಜಲಿಂಗಪ್ಪ ಮಹಾಲಿಂಗಪ್ಪ | ಮುಂಬಡ್ತಿ | 01.05.1957 | 06.03.1986 | 25.01.2007 (ಒಇ519 ಪಿಪಿಇ 2005) | 12.11.2004 (ಪೂರ್ವಾನ್ವಯ) |
| 3 | ಡಿ.ಎಂ. ಕಾಮೋಜಿ | ಮುಂಬಡ್ತಿ | 01.03.1955 | 04.03.1986 | 25.01.2007 (ಒಇ519 ಪಿಪಿಇ 2005) | 12.11.2004 (ಪೂರ್ವಾನ್ವಯ) |
| 4 | ಜಯಗೊಂಡ ಮಹಾವೀರ ಪಾಯಪ್ಪ | ಮುಂಬಡ್ತಿ | 25.09.1955 | 28.02.1986 | 25.01.2007 (ಒಇ519 ಪಿಪಿಇ 2005) | 12.11.2004 (ಪೂರ್ವಾನ್ವಯ) |
| 5 | ಬಿ.ಆರ್. ನಾಡಗೌಡರ್ | ಮುಂಬಡ್ತಿ | 15.08.1956 | 03.03.1986 | 25.01.2007 (ಒಇ519 ಪಿಪಿಇ 2005) | 12.11.2004 (ಪೂರ್ವಾನ್ವಯ) |
| 6 | ಎಸ್.ಟಿ. ಬಿಕ್ಕಣ್ಣವರ್ | ಮುಂಬಡ್ತಿ | 20.09.1955 | 03.03.1986 | 25.01.2007 (ಒಇ519 ಪಿಪಿಇ 2005) | 12.11.2004 (ಪೂರ್ವಾನ್ವಯ) |
| 7 | ಜಿತೂರಿ ತಿಪ್ಪಣ್ಣಸಾ ಶೇಷಣ್ಣಸಾ | ಮುಂಬಡ್ತಿ | 01.08.1956 | 27.06.1986 | 25.01.2007 (ಒಇ519 ಪಿಪಿಇ 2005) | 12.11.2004 (ಪೂರ್ವಾನ್ವಯ) |
| 8 | ಬಿ.ಆರ್. ಕುಲಕರ್ಣಿ | ಮುಂಬಡ್ತಿ | 01.06.1956 | 05.03.1986 | 25.01.2007 (ಒಇ519 ಪಿಪಿಇ 2005) | 12.11.2004 (ಪೂರ್ವಾನ್ವಯ) |
| 9 | ದೇವಾಪುರ ವೆಂಕಣ್ಣ | ಮುಂಬಡ್ತಿ | 23.07.1956 | 05.07.1986 | 04..11.2011 (ಒಇ 360 ಪಿಪಿಇ 2010) | 18.06.2007 (ಪೂರ್ವಾನ್ವಯ) |
| 10 | ಪುಷ್ಪಾ ಎಸ್. ನಾಯಕ್ | ಮುಂಬಡ್ತಿ | 19.04.1956 | 27.06.1986 | 04..11.2011 (ಒಇ 360 ಪಿಪಿಇ 2010) | 18.06.2007 (ಪೂರ್ವಾನ್ವಯ) |
| 11 | ಕೆ. ರುದ್ರಸ್ವಾಮಿ | ಮುಂಬಡ್ತಿ | 01.06.1958 | 28.01.1991 | 04..11.2011 (ಒಇ 360 ಪಿಪಿಇ 2010) | 18.06.2007 (ಪೂರ್ವಾನ್ವಯ) |
| 12 | ಘೋರಡೆ ಅಂಬೇಡ್ಕರ್ ಸಿದ್ದಪ್ಪ | ಮುಂಬಡ್ತಿ | 01.06.1957 | 28.01.1991 | 04..11.2011 (ಒಇ 360 ಪಿಪಿಇ 2010) | 18.06.2007 (ಪೂರ್ವಾನ್ವಯ) |
| 13 | ಲಮಾಣಿ ರಾಮಚಂದ್ರ ನಾರಾಯಣ | ಮುಂಬಡ್ತಿ | 01.06.1959 | 30.01.1991 | 04..11.2011 (ಒಇ 360 ಪಿಪಿಇ 2010) | 18.06.2007 (ಪೂರ್ವಾನ್ವಯ) |
| 14 | ಬಿ. ರಂಗಯ್ಯ | ಮುಂಬಡ್ತಿ | 01.06.1959 | 31.01.1991 | 04..11.2011 (ಒಇ 360 ಪಿಪಿಇ 2010) | 18.06.2007 (ಪೂರ್ವಾನ್ವಯ) |
| 15 | ತಳವಾರ್ ಅಶೋಕ ಮಹಾದೇವಪ್ಪ | ಮುಂಬಡ್ತಿ | 01.06.1957 | 21.01.1991 | 04.11.2011 (ಒಇ 360 ಪಿಪಿಇ 2010) | 18.06.2007 (ಪೂರ್ವಾನ್ವಯ) |
| 16 | ಟಿ. ನಾಗರಾಜರೆಡ್ಡಿ | ಮುಂಬಡ್ತಿ | 05.01.1955 | 11.12.1986 | 04.11.2011 (ಒಇ 360 ಪಿಪಿಇ 2010) | 24.07.2008 (ಪೂರ್ವಾನ್ವಯ) |
| 17 | ಅಣ್ಣಾ ಸಾಹೇಬ ಅಪ್ಪಾಸಾಹೇಬ ಪಾರಶೆಟ್ಟಿ | ಮುಂಬಡ್ತಿ | 26.05.1955 | 04.08.1989 | 04.11.2011 (ಒಇ 360 ಪಿಪಿಇ 2010) | 24.07.2008 (ಪೂರ್ವಾನ್ವಯ) |
| 18 | ಜೆ.ಎನ್. ದೇಸಾಯಿ | ಮುಂಬಡ್ತಿ | 24.4.1955 | 07.08.1989 | 21.04.2011 (ಒಇ 305 ಪಿಪಿಇ 2012) | 24.07.2008 (ಪೂರ್ವಾನ್ವಯ) |
| 19 | ಎಸ್.ಆರ್. ದೇಸಾಯಿ | ಮುಂಬಡ್ತಿ | 27.05.1955 | 04.08.1989 | 04.11.2011 (ಒಇ 360 ಪಿಪಿಇ 2010) | 24.07.2008 (ಪೂರ್ವಾನ್ವಯ) |
| 20 | ವಿ.ಎಸ್.ಭಟ್ | ಮುಂಬಡ್ತಿ | 25.02.1958 | 04.08.1989 | 26.06.2014 (ಒಇ 524 ಪಿಪಿಇ 2012) | 24.07.2008 (ಪೂರ್ವಾನ್ವಯ) |
| 21 | ಟಿ.ಎಸ್. ಗೋಪಿನಾಥ್ | ಮುಂಬಡ್ತಿ | 18.06.1958 | 02.08.1989 | 04.11.2011 (ಒಇ 360 ಪಿಪಿಇ 2010) | 24.07.2008 (ಪೂರ್ವಾನ್ವಯ) |
| 22 | ಎಲ್.ಎಸ್ ಸುಳ್ಳದ್ | ಮುಂಬಡ್ತಿ | 20.08.1957 | 05.08.1989 | 04.11.2011 (ಒಇ 360 ಪಿಪಿಇ 2010) | 24.07.2008 (ಪೂರ್ವಾನ್ವಯ) |
| 23 | ಪೂಜಾರಿ ರುದ್ರಪ್ಪ | ಮುಂಬಡ್ತಿ | 23.07.1958 | 24.06.1994 | 04.11.2011 (ಒಇ 360 ಪಿಪಿಇ 2010) | 24.07.2008 (ಪೂರ್ವಾನ್ವಯ) |
| 24 | ಲಲಿತ ಬಸವಣ್ಣೆಪ್ಪ ಸಂಗಣ್ಣವರ್ | ಮುಂಬಡ್ತಿ | 01.04.1957 | 25.06.1994 | 04.11.2011 (ಒಇ 360 ಪಿಪಿಇ 2010) | 24.07.2008 (ಪೂರ್ವಾನ್ವಯ) |

| 01 | 02 | 03 | 04 | 05 | 06 | 07 |
|---|---|---|---|---|---|---|
| 25 | ಪಂಚಪ್ಪ ಭೀಮಪ್ಪ ಧರೆಣ್ಣವರ್ | ಮುಂಬಡ್ತಿ | 23.07.1961 | 23.06.1994 | 04.11.2011 (ಒಇ 360 ಪಿಪಿಇ 2010) | 24.07.2008 (ಪೂರ್ವಾನ್ವಯ) |
| 26 | ನಾರಾಯಣ ಡಿ. | ಮುಂಬಡ್ತಿ | 20.05.1963 | 24.06.1994 | 04.11.2011 (ಒಇ 360 ಪಿಪಿಇ 2010) | 24.07.2008 (ಪೂರ್ವಾನ್ವಯ) |
| 27 | ರಘುಮೂರ್ತಿ ಕೃಷ್ಣಭಟ್ಟ | ಮುಂಬಡ್ತಿ | 16.04.1958 | 08.08.1989 | 04.11.2011 (ಒಇ 360 ಪಿಪಿಇ 2010) | 04.11.2011 |
| 28 | ವಾಗೀಶ್ ವಿ. ಹಿರೇಮಠ್ | ಮುಂಬಡ್ತಿ (ಒಇ 217 ಪಿಪಿಇ 2013, ದಿನಾಂಕ : 21.11.2013 ರನ್ವಯ ಪೂರ್ವಾನ್ವಯ ಬಡ್ತಿ) | 20.02.1955 | 04.08.1989 | 21.11.2013 (ಒಇ 217 ಪಿಪಿಇ 2013) | 04.11.2011 (ಪೂರ್ವಾನ್ವಯ) |
| 29 | ಎನ್.ಎಸ್. ಪಾಟೀಲ್ | ಮುಂಬಡ್ತಿ | 15.10.1956 | 03.08.1989 | 04.11.2011 (ಒಇ 360 ಪಿಪಿಇ 2010) | 04.11.2011 |
| 30 | ಜಿ.ಹೆಚ್. ಅಮೃತ್ ಕುಮಾರ್ | ಮುಂಬಡ್ತಿ | 14.03.1959 | 03.08.1989 | 04.11.2011 (ಒಇ 360 ಪಿಪಿಇ 2010) | 04.11.2011 |
| 31 | ಎಂ.ಆರ್. ಬನ್ನಿಹಟ್ಟಿ | ಮುಂಬಡ್ತಿ | 01.07.1957 | 03.08.1989 | 04.11.2011 (ಒಇ 360 ಪಿಪಿಇ 2010) | 04.11.2011 |
| 32 | ಎಸ್.ಬಷೀರ್ ಅಹಮದ್ | ಮುಂಬಡ್ತಿ | 14.06.1959 | 02.08.1989 | 04.11.2011 (ಒಇ 360 ಪಿಪಿಇ 2010) | 04.11.2011 |
| 33 | ಬಿ.ಜಯರಾಂ | ಮುಂಬಡ್ತಿ | 29.07.1958 | 24.06.1994 | 04.11.2011 (ಒಇ 360 ಪಿಪಿಇ 2010) | 04.11.2011 |
| 34 | ಅಂಜಲೀದೇವಿ | ಮುಂಬಡ್ತಿ | 10.05.1969 | 09.02.1998 | 04.11.2011 (ಒಇ 360 ಪಿಪಿಇ 2010) | 04.11.2011 |
| 35 | ಡಿ. ರಮೇಶ್ ಬಾಬು | ಮುಂಬಡ್ತಿ | 01.03.1967 | 06.02.1998 | 04.11.2011 (ಒಇ 360 ಪಿಪಿಇ 2010) | 04.11.2011 |
| 36 | ಹೆಚ್.ಎಂ. ರಘುಕುಮಾರ್ | ಮುಂಬಡ್ತಿ | 10.05.1959 | 09.02.1998 | 04.11.2011 (ಒಇ 360 ಪಿಪಿಇ 2010) | 04.11.2011 |
| 37 | ಬಾಪೂಜಿ ಯಲ್ಲಪ್ಪ ಕೆಂಬಾವಿ | ಮುಂಬಡ್ತಿ | 01.06.1961 | 09.02.1998 | 04.11.2011 (ಒಇ 360 ಪಿಪಿಇ 2010) | 04.11.2011 |
| 38 | ಬಿ.ಎಂ. ನಾಗರಾಜ್ | ಮುಂಬಡ್ತಿ | 01.06.1959 | 05.02.1998 | 04.11.2011 (ಒಇ 360 ಪಿಪಿಇ 2010) | 04.11.2011 |
| 39 | ಜಿ. ಸುದರ್ಶನ್ | ಮುಂಬಡ್ತಿ | 25.09.1962 | 09.02.1998 | 04.11.2011 (ಒಇ 360 ಪಿಪಿಇ 2010) | 04.11.2011 |
| 40 | ಲಕ್ಷ್ಮೀಬಾಯಿ ಮರಪ್ಪ ಯಳಸಂಗೀಕರ್ | ಮುಂಬಡ್ತಿ | 25.10.1965 | 09.02.1998 | 04.11.2011 (ಒಇ 360 ಪಿಪಿಇ 2010) | 04.11.2011 |
| 41 | ಸಂಜೀವ ರಾಮಚಂದ್ರ ಶಿಂಧೆ | ಮುಂಬಡ್ತಿ | 20.06.1969 | 13.02.1998 | 04.11.2011 (ಒಇ 360 ಪಿಪಿಇ 2010) | 04.11.2011 |
| 42 | ಮಹಾಂತಪ್ಪ | ಮುಂಬಡ್ತಿ | 23.12.1959 | 11.02.1998 | 12.11.2014 (ಒಇ 336 ಪಿಪಿಇ 2014) (ಪೂರ್ವಾನ್ವಯ) | 04.11.2011 |
| 43 | ಶ್ರೀಶೈಲ ಶಿವಪ್ಪ ಲೋಕೂರ್ | ಮುಂಬಡ್ತಿ | 01.06.1964 | 9.02.1998 | 04.11.2011 (ಒಇ 360 ಪಿಪಿಇ 2010) | 04.11.2011 |

| 01 | 02 | 03 | 04 | 05 | 06 | 07 |
|---|---|---|---|---|---|---|
| 44 | ಸರೋಜ ಗೋಪಾಲ ಹೊಸಮನಿ | ಮುಂಬಡ್ತಿ | 17.01.1966 | 09.02.1998 | 04.11.2011 (ಒಇ 360 ಪಿಪಿಇ 2010) | 04.11.2011 |
| 45 | ಜಿ. ಬಸವರಾಜು | ಮುಂಬಡ್ತಿ | 03.03.1955 | 03.08.1989 | 05.04.2012 (ಒಇ 38 ಪಿಪಿಇ 2012) | 05.04.2012 |
| 46 | ಆರ್.ಎಸ್. ಮಾವಿನತೋಪ್ | ಮುಂಬಡ್ತಿ | 08.06.1957 | 03.08.1989 | 05.04.2012 (ಒಇ 38 ಪಿಪಿಇ 2012) | 05.04.2012 |
| 47 | ಎನ್. ನಾಗೇಂದ್ರಪ್ಪ | ಮುಂಬಡ್ತಿ | 04.07.1956 | 05.08.1989 | 05.04.2012 (ಒಇ 38 ಪಿಪಿಇ 2012) | 05.04.2012 |
| 48 | ಎಂ.ಎ. ತಟಗಾರ್ | ಮುಂಬಡ್ತಿ | 01.06.1955 | 07.08.1989 | 05.04.2012 (ಒಇ 38 ಪಿಪಿಇ 2012) | 05.04.2012 |
| 49 | ಕಿಶೋರ್ ಕುಮಾರ್ ಗಣಪತರಾವ್ ಮುಚ್ಚಂಡಿ | ಮುಂಬಡ್ತಿ | 24.02.1957 | 07.08.1989 | 05.04.2012 (ಒಇ 38 ಪಿಪಿಇ 2012) | 05.04.2012 |
| 50 | ಎಂ.ಹೆಚ್. ಕಬಾಡಿ | ಮುಂಬಡ್ತಿ | 06.07.1955 | 01.08.1989 | 05.04.2012 (ಒಇ 38 ಪಿಪಿಇ 2012) | 05.04.2012 |
| 51 | ಈಶ್ವರ ಐಯಪ್ಪ ಅಡಿನ್ | ಮುಂಬಡ್ತಿ | 20.02.1955 | 03.08.1989 | 05.04.2012 (ಒಇ 38 ಪಿಪಿಇ 2012) | 05.04.2012 |
| 52 | ರಾಜಗೀರ್ ಬೀರಪ್ಪ | ಮುಂಬಡ್ತಿ | 18.07.1963 | 06.02.1998 | 05.04.2012 (ಒಇ 38 ಪಿಪಿಇ 2012) | 05.04.2012 |
| 53 | ಬಿ. ರಂಗಸ್ವಾಮಿ | ಮುಂಬಡ್ತಿ | 05.06.1963 | 06.02.1998 | 05.04.2012 (ಒಇ 38 ಪಿಪಿಇ 2012) | 05.04.2012 |
| 54 | ಚಿನ್ನವೆಂಕಟರವಣಪ್ಪ | ಮುಂಬಡ್ತಿ | 01.06.1967 | 06.02.1998 | 05.04.2012 (ಒಇ 38 ಪಿಪಿಇ 2012) | 05.04.2012 |
| 55 | ಕೆ.ಜೆ. ಮೀನಾಕುಮಾರಿ | ಮುಂಬಡ್ತಿ | 19.08.1970 | 24.01.2000 | 05.04.2012 (ಒಇ 38 ಪಿಪಿಇ 2012) | 05.04.2012 |
| 56 | ಜಿ.ಕೆ. ಮಾಹುರ್‌ಕರ್ | ಮುಂಬಡ್ತಿ | 12.06.1965 | 24.01.2000 | 05.04.2012 (ಒಇ 38 ಪಿಪಿಇ 2012) | 05.04.2012 |
| 57 | ಎಸ್.ಎನ್. ಹಿರೇಮನಿ | ಮುಂಬಡ್ತಿ | 22.07.1959 | 03.08.1989 | 31.05.2012 (ಒಇ 260 ಪಿಪಿಇ 2012) | 31.05.2012 |
| 58 | ಕೆ. ಶಿವಪ್ರಸಾದ್ ಆಳ್ವ | ಮುಂಬಡ್ತಿ | 27.03.1967 | 23.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 59 | ಕೆ. ಹೆಚ್. ಶ್ರೀಮತಿ | ಮುಂಬಡ್ತಿ | 28.08.1962 | 27.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 60 | ಅಜಿತ್ ಕುಮಾರ್ ಡಿ.ಹಮಿಗಿ | ಮುಂಬಡ್ತಿ | 03.05.1960 | 24.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 61 | ಭೀಮಾ ಶಂಕರ ಅಂಬಲಗಿ | ಮುಂಬಡ್ತಿ | 23.07.1959 | 27.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 62 | ಶೈಲಜಾ ಮಲ್ಲನಗೌಡ ಪಾಟೀಲ್ | ಮುಂಬಡ್ತಿ | 04.05.1964 | 28.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 63 | ಎ.ಪಿ. ಫಿರೋಜ್ ಖಾನ್ | ಮುಂಬಡ್ತಿ | 01.06.1963 | 24.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 64 | ಹರಸೂರು ಚನ್ನಪ್ಪ ಗುರುಶಾಂತಪ್ಪ | ಮುಂಬಡ್ತಿ | 01.06.1962 | 28.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 65 | ಸಿದ್ದಪ್ಪ ರುದ್ರಪ್ಪ ಸೂಡಿ | ಮುಂಬಡ್ತಿ | 08.07.1956 | 25.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 66 | ಎಸ್.ಎಂ. ನಾಗಪ್ಪ | ಮುಂಬಡ್ತಿ | 01.10.1957 | 28.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 67 | ವಿರೂಪಾಕ್ಷಪ್ಪ ಗಂಗಾಧರಪ್ಪ ಯಳಗೇರಿ | ಮುಂಬಡ್ತಿ | 01.06.1960 | 24.06.1994 | 20.06.2012 (ಒಇ 260 ಪಿಪಿಇ 2012) | 20.06.2012 |

| 01 | 02 | 03 | 04 | 05 | 06 | 07 |
|---|---|---|---|---|---|---|
| 68 | ಜೆ. ಕಮಲ | ಮುಂಬಡ್ತಿ | 31.10.1958 | 23.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 69 | ಕೆ.ಜಿ. ಪುರಾಣಿಕಮಠ | ಮುಂಬಡ್ತಿ | 01.06.1955 | 25.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 70 | ಜ್ಯೋತಿಬಾ ಲಕ್ಷ್ಮಣ ಪವಾರ್ | ಮುಂಬಡ್ತಿ | 07.12.1959 | 23.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 71 | ಕೆ. ಪುಷ್ಪರಾಜ್ | ಮುಂಬಡ್ತಿ | 03.4.1959 | 23.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 72 | ಕೆಂಚನಗೌಡ್ರ ಕೊಟ್ರೇಗೌಡ | ಮುಂಬಡ್ತಿ | 15.07.1960 | 27.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 73 | ಭಟ್ಟ ಸಂಜಯಕುಮಾರ ವೆಂಕಟರಮಣ | ಮುಂಬಡ್ತಿ | 04.02.1964 | 22.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 74 | ಚನ್ನಮಲ್ಲಪ್ಪ ಮಹಾದೇವಪ್ಪ ಬೆಳಲದವರ್ | ಮುಂಬಡ್ತಿ | 16.04.1959 | 24.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 75 | ಮಹಾಂತಪ್ಪ ಪಾಟೀಲ್ | ಮುಂಬಡ್ತಿ | 27.07.1958 | 27.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 76 | ಅರುಂಧತಿ ಗುರುರಾಜರಾವ್ | ಮುಂಬಡ್ತಿ | 21.04.1959 | 28.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 77 | ಭಾಂಡೇಕರ್ ಧರ್ಮಪ್ಪ ಅಣ್ಣಪ್ಪ | ಮುಂಬಡ್ತಿ | 01.06.1961 | 24.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 78 | ಆನಂದ ಮಾರುತಿ ಹೊಸಮನಿ | ಮುಂಬಡ್ತಿ | 01.06.1958 | 23.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 79 | ಸುರೇಶ್ ಆನಂತ ಪಾಸ್ತೆ | ಮುಂಬಡ್ತಿ | 06.06.1961 | 24.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 80 | ಪರಮಶಿವಯ್ಯ ರಾಚಯ್ಯ ಹೊಸಳ್ಳಿಮಠ | ಮುಂಬಡ್ತಿ | 01.06.1960 | 25.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 81 | ಮಲ್ಲರಾಜೇಗೌಡ | ಮುಂಬಡ್ತಿ | 14.08.1958 | 24.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 82 | ಹೆಚ್.ಇ. ಚಿನ್ನಪ್ಪ | ಮುಂಬಡ್ತಿ | 03.07.1963 | 27.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 83 | ಎನ್.ಆರ್. ಲೋಕೇಶ್ | ಮುಂಬಡ್ತಿ | 06.01.0959 | 24.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 84 | ಆರ್. ಬಾಲಕೃಷ್ಣ | ಮುಂಬಡ್ತಿ | 01.06.1962 | 23.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 85 | ಬಷೀರ್ ಅಹಮದ್ ಇಬ್ರಾಹಿಂ ಮಖಾಂದಾರ್ | ಮುಂಬಡ್ತಿ | 01.06.1963 | 25.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 86 | ಕಲ್ಯಾಣರಾವ್ ಕುಲಕರ್ಣಿ | ಮುಂಬಡ್ತಿ | 01.08.1962 | 23.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 87 | ಪಾಟೀಲ್ ಸಿದ್ದನಗೌಡ ವೀರಭದ್ರಗೌಡ | ಮುಂಬಡ್ತಿ | 21.07.1962 | 23.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 88 | ಬ್ಯಾಳಿರೊಟ್ಟಿ ಮಹಮದ್ ಆಲಿ ಮಹಮದ್ ಸಾಬ್ | ಮುಂಬಡ್ತಿ | 08.10.1957 | 23.06.1994 | 20.06.2012 (ಒಇ 260 ಪಿಪಿಇ 2012) | 20.06.2012 |
| 89 | ಎಂ. ಚಂದ್ರಪ್ಪ | ಮುಂಬಡ್ತಿ | 01.06.1961 | 11.02.1998 | 20.06.2012 (ಒಇ 260 ಪಿಪಿಇ 2012) | 20.06.2012 |

| 01 | 02 | 03 | 04 | 05 | 06 | 07 |
|---|---|---|---|---|---|---|
| 90 | ಬಲಭೀಮ | ಮುಂಬಡ್ತಿ | 01.06.1960 | 09.02.1998 | 20.06.2012 (ಒಇ 260 ಪಿಪಿಇ 2012) | 20.06.2012 |
| 91 | ಸಿಂಗೆಚಾಂಗದೇವ | ಮುಂಬಡ್ತಿ | 11.01.1967 | 17.01.2000 | 20.06.2012 (ಒಇ 260 ಪಿಪಿಇ 2012) | 20.06.2012 |
| 92 | ಬಿ.ಕೆ. ಕಾಮಾಕ್ಷಿ | ಮುಂಬಡ್ತಿ | 13.06.1965 | 21.01.2000 | 20.06.2012 (ಒಇ 260 ಪಿಪಿಇ 2012) | 20.06.2012 |

ಶ್ರೀ ಕೆ. ಶಿವಪ್ರಸಾದ್ ಆಳ್ವ, ಸರ್ಕಾರಿ ಅಭಿಯೋಜಕರು ಇವರು ಸಲ್ಲಿಸಿರುವ ಆಕ್ಷೇಪಣೆಯನ್ನು ಪರಿಶೀಲಿಸಿದ್ದು, ಜ್ಯೇಷ್ಠತಾ ಪಟ್ಟಿ ಕ್ರಮ ಸಂಖ್ಯೆ: 23, 24,25,26 ರಲ್ಲಿ ನಮೂದಿಸಿರುವ ಅಧಿಕಾರಿಗಳಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 360 ಪಿಪಿಇ 2010, ದಿನಾಂಕ: 04.11.2011ರ ಪ್ರಕಾರ ದಿನಾಂಕ: 24.07.2008 ರಿಂದ ಪೂರ್ವಾನ್ವಯ ಮುಂಬಡ್ತಿ ನೀಡಲಾಗಿದೆ. ಕ್ರಮ ಸಂಖ್ಯೆ: 33 ರಿಂದ 44 ರವರೆಗಿನ ಅಧಿಕಾರಿಗಳಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 360 ಪಿಪಿಇ 2010, ದಿನಾಂಕ: 04.11.2011ರ ಪ್ರಕಾರ ಬಡ್ತಿ ದೊರೆತಿರುತ್ತದೆ. ಕ್ರಮಸಂಖ್ಯೆ: 52 ರಿಂದ 56 ರವರೆಗಿನ ಅಧಿಕಾರಿಗಳಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 38 ಪಿಪಿಇ 2012, ದಿನಾಂಕ: 05.04.2012ರ ಪ್ರಕಾರ ಬಡ್ತಿ ದೊರೆತಿರುತ್ತದೆ. ಶ್ರೀ ಕೆ. ಶಿವಪ್ರಸಾದ್ ಆಳ್ವ ಅವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 360 ಪಿಪಿಇ, ದಿನಾಂಕ: 20.06.2012ರ ಪ್ರಕಾರ ಬಡ್ತಿ ದೊರೆತಿರುತ್ತದೆ. ಅವರಿಗೂ ಹಾಗೂ ಅವರು ಅವಲೋಕಿಸಿರುವ ಅಧಿಕಾರಿಗಳಿಗೆ ಬೇರೆ ಬೇರೆ ದಿನಾಂಕಗಳಲ್ಲಿ ಬಡ್ತಿ ದೊರೆತಿರುತ್ತದೆ. ಅಲ್ಲದೇ ಸರ್ಕಾರಿ ಅಭಿಯೋಜಕರ ಹುದ್ದೆಗೆ ಜ್ಯೇಷ್ಠತೆ ಆಧಾರದ ಮೇಲೆ ಬಡ್ತಿಯನ್ನು ನೀಡಲಾಗುತ್ತದೆ. ಆದ್ದರಿಂದ ಶ್ರೀ ಕೆ. ಶಿವಪ್ರಸಾದ್ ಆಳ್ವ, ಸರ್ಕಾರಿ ಅಭಿಯೋಜಕರು ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ: 58ರಲ್ಲಿ ನಿಗಧಿಪಡಿಸಿರುವುದು ಸರಿಯಾಗಿರುತ್ತದೆ.

**ದೇವೆಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
(ಕಾಫಿಪೋಸ ಮತ್ತು ಅಭಿಯೋಗಗಳು)

P.R. 913
S.C. 5

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರುರವರ ನ್ಯಾಯಾಲಯ.**

**ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ : 58/2014-15 ದಿನಾಂಕ 18/12/2014.**

**ಸಂಖ್ಯೆ: ಎ1.ಎಫ್‌ಒಸಿ, 58/2014-15 ದಿನಾಂಕ: 14/09/2015.**

**ಉಪಸ್ಥಿತರು :** ಶ್ರೀ ಎಂ. ಪುಟ್ಟಣ್ಣ
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,ಅರಣ್ಯ ಸಂಚಾರಿ ದಳ, ಬೆಂಗಳೂರು

**ಫಿರ್ಯಾದಿ :** ವಲಯ ಅರಣ್ಯಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

**ಆರೋಪಿಗಳು :** ಪತ್ತೆಯಾಗಿರುವುದಿಲ್ಲ.

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ: 17-12-2014 ರಂದು ರಕ್ತಚಂದನ ಮರದ ತುಂಡುಗಳನ್ನು ಅಕ್ರಮವಾಗಿ ಸಾಗಾಣಿಕೆ ಮಾಡುವ ಬಗ್ಗೆ ಖಚಿತ ವರ್ತಮಾನದ ಮೇರೆಗೆ ಅರಣ್ಯ ಸಂಚಾರಿ ದಳದ ವಲಯ ಅರಣ್ಯಾಧಿಕಾರಿಗಳು ಹಾಗೂ ಸಿಬ್ಬಂದಿಗಳು ಸದರಿ ದಿನದಂದು ಸಂಜೆ ಸುಮಾರು 7.00 ಗಂಟೆಯ ಸಮಯದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕು, ಹೊಸಕೋಟೆ-ಮಾಲೂರು ರಸ್ತೆಯ ದೇವನಗುಂದಿ ಕ್ರಾಸ್ ಬಳಿ ಇಲಾಖಾ ವಾಹನದಲ್ಲಿ ಗಸ್ತು ಕಾರ್ಯ ಮಾಡುತ್ತಿದ್ದಾಗ ದಿನಾಂಕ: 18-12-2014 ರಂದು ಬೆಳಗಿನ ಜಾವ ಸುಮಾರು 2.30 ಗಂಟೆಯ ಸಮಯದಲ್ಲಿ ಮಾಲೂರು ಕಡೆಯಿಂದ ಹೊಸಕೋಟೆ ಕಡೆಗೆ ಅನುಮಾನಾಸ್ಪದವಾಗಿ ಬರುತ್ತಿದ್ದ ಲಾರಿಯನ್ನು ಕಂಡು ನಿಲ್ಲಿಸಲು ಪ್ರಯತ್ನಿಸಿದಾಗ ಚಾಲಕನು ಲಾರಿಯನ್ನು ನಿಲ್ಲಿಸಿ ಓಡಲು ಪ್ರಾರಂಭಿಸಿದನು. ಆತನನ್ನು ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಿದಾಗ ಕತ್ತಲಿನಲ್ಲಿ ತಪ್ಪಿಸಿಕೊಂಡು ಓಡಿ ಪರಾರಿಯಾಗಿರುತ್ತಾನೆ. ನಂತರ ಲಾರಿಯನ್ನು ಬ್ಯಾಟರಿಗಳ ಸಹಾಯದಿಂದ ಅಜಮಾಯಿಸಿ ನೋಡಲಾಗಿ, ಲಾರಿಯ ಮೇಲ್ಭಾಗದಲ್ಲಿ ಮೆಕ್ಕೆಜೋಳದ ಮೂಟೆಗಳು ತುಂಬಿರುವುದು ಕಂಡುಬಂದಿತು. ಸದರಿ ಮೂಟೆಗಳನ್ನು ಪಕ್ಕಕ್ಕೆ ಜರುಗಿಸಿ ಒಳಭಾಗವನ್ನು ನೋಡಿದಾಗ ಹಸಿ ಮರದ ತುಂಡುಗಳನ್ನು ತುಂಬಿರುವುದು ಕಂಡುಬಂದಿದ್ದು, ಸದರಿ ಮರದ ತುಂಡುಗಳನ್ನು ಕೂಲಂಕುಶವಾಗಿ ಪರಿಶೀಲಿಸಿದಾಗ ಅವುಗಳ ಬಣ್ಣ ಹಾಗೂ ಗುಣಲಕ್ಷಣಗಳಿಂದ ರಕ್ತಚಂದನ ಮರದ ಜಾತಿಗೆ ಸೇರಿದ ಮರಗಳ ತುಂಡುಗಳೆಂದು ಖಾತರಿಪಡಿಸಿಕೊಂಡು ಲಾರಿಯನ್ನು ಪರಿವೀಕ್ಷಿಸಲಾಗಿ, ಲಾರಿ ನೋಂದಣಿ ಸಂಖ್ಯೆ: ಎಡಿಡಿ-3805 ಎಂದು ನಮೂದಿಸಲಾಗಿರುತ್ತದೆ. ಲಾರಿಯ ಒಳಭಾಗದಲ್ಲಿ ಪರಿಶೀಲಿಸಲಾಗಿ, ಯಾವುದೇ ದಾಖಲೆ ಪತ್ರಗಳು ಇರುವುದು ಕಂಡುಬಂದಿರುವುದಿಲ್ಲ. ಈ ಸಮಯದಲ್ಲಿ ಲಾರಿಯಲ್ಲಿದ್ದ ಮಾಲನ್ನು ಎಣಿಕೆ ಮತ್ತು ಅಳತೆ ಮಾಡಲು ಯಾವುದೇ ಅನುಕೂಲಗಳಿಲ್ಲದಿದ್ದ ಕಾರಣ ಮಾಲು ಸಹಿತ ವಾಹನವನ್ನು ಸರ್ಕಾರದ ಪರ ಅಮಾನತ್ತುಪಡಿಸಿ ಮುಂಜಾನೆ ಮಲ್ಲೇಶ್ವರಂನಲ್ಲಿರುವ ಅರಣ್ಯ ಭವನದ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆ ಬಳಿ ಸಾಗಿಸಿ ನಂತರ ವಿಷಯವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರಿಗೆ ತಿಳಿಸಿ ನಂತರ ಇಲಾಖಾ ವಶದಲ್ಲಿದ್ದ ತೂಕದ ಯಂತ್ರದಿಂದ ಮೆಕ್ಕೆಜೋಳವನ್ನು ಎಣಿಕೆ ಮತ್ತು ತೂಕ ಮಾಡಿದಾಗ ಒಟ್ಟು 24 ಮೂಟೆಗಳಿಂದ 1,229 ಕೆ.ಜಿ. ಮೆಕ್ಕೆಜೋಳ ಇರುವುದು ಕಂಡುಬಂದಿರುತ್ತದೆ. ನಂತರ ರಕ್ತಚಂದನ ಮರದ ತುಂಡುಗಳನ್ನು ಎಣಿಕೆ ಮತ್ತು ತೂಕ ಮಾಡಿದಾಗ

ಒಟ್ಟು 193 ತುಂಡುಗಳಿಂದ ತೂಕ 3,983 ಕೆ.ಜಿ. ಇರುವುದು ಕಂಡುಬಂದಿರುತ್ತದೆ. ಸದರಿ ಮರಗಳ ತುಂಡುಗಳಿಗೆ ಅಳತೆ ಪಟ್ಟಿಯನ್ನು ಪ್ರತ್ಯೇಕವಾಗಿ ನಮೂದಿಸಿಕೊಳ್ಳಲಾಯಿತು. ಲಾರಿಯನ್ನು ಅಜಮಾಯಿಸಿ ನೋಡಲಾಗಿ, ಚಾರ್ಸಿ ಸಂಖ್ಯೆ: AL370/129 ALEN 100064 ಮತ್ತು ಇಂಜಿನ್ ಸಂಖ್ಯೆ: F1851422EF630 ಎಂದು ನಮೂದಲಾಗಿರುವುದು ಕಂಡು ಬಂದಿರುತ್ತದೆ.

ನಂತರ ಲಾರಿಯನ್ನು ಅರಣ್ಯ ಭವನದ ಹಿಂಭಾಗದ ಆವರಣದಲ್ಲಿ ಸುರಕ್ಷತೆಯಿಂದ ನಿಲ್ಲಿಸಲು ಮತ್ತು ಮೆಕ್ಕೆಜೋಳದ ಮೂಟೆಗಳೊಂದಿಗೆ ರಕ್ತಚಂದನ ಮರದ ತುಂಡುಗಳನ್ನು ಅರಣ್ಯ ಭವನದ ದಾಸ್ತಾನು ಮಳಿಗೆಯಲ್ಲಿ ಸುರಕ್ಷತೆಗೊಳಿಸಲು ತೀರ್ಮಾನಿಸಿ ಸ್ಥಳದಲ್ಲಿ ಪಂಚನಾಮೆ ಕ್ರಮ ಜರುಗಿಸಿ ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 79, 80 ಮತ್ತು ಕರ್ನಾಟಕ ಅರಣ್ಯ ಅಧಿನಿಯಮ 1969ರ ನಿಯಮ 144ರ ಉಲ್ಲಂಘನೆಯಾಗಿರುವುದರಿಂದ ಈ ಕೃತ್ಯಕ್ಕೆ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ: 58/2014–15 ದಾಖಲು ಮಾಡಿ ಸದರಿ ಮಾಲು ಸಹಿತ ವಾಹನವನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಮೊಕದ್ದಮೆಯ ಬಗ್ಗೆ ಮುಂದಿನ ಕ್ರಮ ಜರುಗಿಸಲು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ವಾಹನ ಮತ್ತು ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

ಪ್ರಕರಣದ ತನಿಖೆ ನಡೆಸಿದ ವಲಯ ಅರಣ್ಯಾಧಿಕಾರಿಗಳು ಆರೋಪಿಗಳು ಪತ್ತೆಯಾಗದೇ ಇರುವ ಕಾರಣ, ಅಮಾನತ್ತುಪಡಿಸಿಕೊಂಡಿರುವ ಲಾರಿ ನೋಂದಣಿ ಸಂಖ್ಯೆ: ಎಡಿಡಿ–3805 ಹಾಗೂ ಅದರಲ್ಲಿದ್ದ 3,983 ಕೆ.ಜಿ. ತೂಕವುಳ್ಳ ಒಟ್ಟು 193 ರಕ್ತಚಂದನ ಮರದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳುವ ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು ವರದಿಯಲ್ಲಿ ಕೋರಿರುತ್ತಾರೆ.

ಅಧಿಕೃತ ಅಧಿಕಾರಿ ಹಾಗೂ ಉಪ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರುರವರ ಕಛೇರಿಯಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ ಇವರಿಗೆ ದಿನಾಂಕ: 22–12–2014, 16–01–2015 ಹಾಗೂ 06–02–2015ರಲ್ಲಿ ಪತ್ರಗಳನ್ನು ಬರೆದು ಲಾರಿ ನೋಂದಣಿ ಸಂಖ್ಯೆ: ಎಡಿಡಿ–3805 ವಾಹನದ ಮಾಲೀಕತ್ವದ ವಿವರಗಳನ್ನು ನೀಡುವಂತೆ ಕೋರಲಾಗಿತ್ತು. ಈ ಮಧ್ಯೆ ದಿನಾಂಕ: 02–02–2015 ರಂದು ಡೆಕ್ಕನ್ ಹೆರಾಲ್ಡ್ ದಿನಪತ್ರಿಕೆಯಲ್ಲಿ ಪ್ರಕಟಣೆಯನ್ನು ಹೊರಡಿಸಿ ವಾಹನಕ್ಕೆ ಸಂಬಂಧಪಟ್ಟಂತೆ, ಯಾರಾದರೂ ವಾರಸುದಾರರಿದ್ದಲ್ಲಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರ ಕಛೇರಿಯ ವೇಳೆಯಲ್ಲಿ ಪ್ರಕಟಣೆ ಹೊರಡಿಸಿದ ದಿನಾಂಕದಿಂದ 30 ದಿನದೊಳಗಾಗಿ ಹಾಜರಾಗುವಂತೆ ಸೂಚಿಸಲಾಗಿತ್ತು. ಆದರೆ ವಾಹನಕ್ಕೆ ಸಂಬಂಧಿಸಿದ ಯಾವುದೇ ವಾರಸುದಾರರಾಗಲೀ ಅಥವಾ ಅವರ ಪರ ವಕೀಲರಾಗಲೀ ಕಛೇರಿಗೆ ಹಾಜರಾಗಿರುವುದಿಲ್ಲ.

ದಿನಾಂಕ: 25–02–2015 ರಲ್ಲಿ ಮತ್ತೊಮ್ಮೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ ಇವರಿಗೆ ಪತ್ರ ಬರೆದು ಮುದ್ದಾಂ ಸಿಬ್ಬಂದಿಯನ್ನು ಕಳುಹಿಸಲಾಗಿತ್ತು. ಅದರಂತೆ ದಿನಾಂಕ: 26–02–2015 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ ಇವರು ವಾಹನದ ಮಾಲೀಕತ್ವದ ವಿವರವನ್ನು ದೃಢೀಕರಿಸಿ ಒದಗಿಸಿದ್ದು, ಸದರಿ ವರದಿಯಲ್ಲಿ ವಾಹನದ ಮಾಲೀಕರು ಶ್ರೀ ದುಡೆಕುಲಾ ನೌಶಾದ್ ಬಿನ್ ಡಿ. ಅನ್ವರ್ ಬಾಷಾ, ನಂ.ಸಿ–4, ವಲಸಪಲ್ಲಿ, ಪೆದ್ದಪಂಜನಿ (ಮಂಡಲ್), ಚಿತ್ತೂರು, ಆಂಧ್ರಪ್ರದೇಶ ರಾಜ್ಯ ಎಂದು ತಿಳಿದುಬಂದಿರುತ್ತದೆ. ಈ ಸಂಬಂಧ ವಾಹನದ ಮಾಲೀಕರ ವಿಳಾಸಕ್ಕೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 ಬಿ ಪ್ರಕಾರ ನೋಟಿಸ್ ಹಾಗೂ ಸಮನ್ಸ್ ಅನ್ನು ನೋಂದಾಯಿತ ಅಂಚೆ ಮುಖಾಂತರ ದಿನಾಂಕ : 03–06–2015ರಂದು ಜಾರಿ ಮಾಡಲಾಗಿತ್ತು.

ಅದರಂತೆ ಶ್ರೀ ದುಡೆಕುಲಾ ನೌಶಾದ್ ಬಿನ್.ಡಿ. ಅನ್ವರ್ ಬಾಷಾ ಇವರು ದಿನಾಂಕ: 19–06–2015 ರಂದು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಸಮಕ್ಷಮ ಹಾಜರಾಗಿ ಅಶೋಕ್ ಲೇಲ್ಯಾಂಡ್ ಕಂಪನಿಯ ಲಾರಿ ನೋಂದಣಿ ಸಂಖ್ಯೆ: ಎಡಿಡಿ–3805 ಲಾರಿಯು ತನ್ನ ಮಾಲೀಕತ್ವದಲ್ಲಿದ್ದು, ತನಗೆ ಹಣಕಾಸಿನ ತೊಂದರೆ ಇದ್ದುದರಿಂದ ಮಧ್ಯವರ್ತಿಗಳ ಮುಖಾಂತರ ಶ್ರೀ ಜೆ. ಬಾಬಾಜಾನ್ ಬಿನ್ ಜಾಫರ್‌ಸಾಬ್, ನಂ 508, ದರ್ಗಾ ಮೊಹಲ್ಲಾ, ಮುಳಬಾಗಿಲು ಟೌನ್ ಮತ್ತು ತಾಲ್ಲೂಕು, ಕೋಲಾರ ಜಿಲ್ಲೆ ಎಂಬುವವರಿಗೆ ದಿನಾಂಕ: 27–10–2014 ರಂದು ಕರಾರು ಪತ್ರದ ಮೂಲಕ ಮಾರಾಟ ಮಾಡಿದ್ದಾಗಿ ಹಾಗೂ ಸದರಿ ಲಾರಿಯನ್ನು ತಾನು ಮಾರಾಟ ಮಾಡಿರುವುದರಿಂದ ಲಾರಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ಆಕ್ಷೇಪಣೆಯಾಗಲಿ ತಕರಾರಾಗಲೀ ಇರುವುದಿಲ್ಲವೆಂದು ಲಿಖಿತ ಹೇಳಿಕೆ ನೀಡಿರುತ್ತಾರೆ.

ಶ್ರೀ ದುಡೆಕುಲಾ ನೌಶಾದ್ ಬಿನ್ ಡಿ. ಅನ್ವರ್ ಬಾಷಾ ಇವರು ನೀಡಿರುವ ಹೇಳಿಕೆ ಹಾಗೂ ಕರಾರು ಪತ್ರಗಳ ದಾಖಲೆಗಳ ಮೇರೆಗೆ ಶ್ರೀ ಜೆ. ಬಾಬಾಜಾನ್ ಬಿನ್ ಜಾಫರ್ ಸಾಬ್ ಎಂಬುವವರ ವಿಳಾಸಕ್ಕೆ ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71 ಬಿ ಪ್ರಕಾರ ನೋಟೀಸ್ ಹಾಗೂ ಸಮನ್ಸ್ ಅನ್ನು ನೋಂದಾಯಿತ ಅಂಚೆ ಮುಖಾಂತರ ದಿನಾಂಕ: 24–06–2015 ರಂದು ಜಾರಿ ಮಾಡಲಾಗಿತ್ತು. ಆದರೆ, ಜಾರಿ ಮಾಡಲಾದ ಅಂಚೆ ಲಕೋಟೆಗಳು ಸ್ವೀಕೃತಗೊಳ್ಳದೇ ವಾಪಸ್ ಕಛೇರಿಗೆ ತಲುಪಿರುತ್ತವೆ. ಅಲ್ಲದೇ, ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಲು ವಿಫಲರಾಗಿರುವುದರಿಂದ ಮತ್ತು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರೀತ್ಯಾ ನಡೆಸಲಾದ ನ್ಯಾಯಾಲಯದ ನಡವಳಿಗಳಲ್ಲಿ ಹಾಜರಾಗುವಂತೆ ದಿನಾಂಕ: 03–06–2015 ಹಾಗೂ 24–06–2015 ರಂದು ಸಮನ್ಸ್‌ಗಳನ್ನು ಜಾರಿ ಮಾಡಿದ್ದರೂ ಸಹ ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರಾಗಲು ವಿಫಲರಾಗಿರುವುದರಿಂದ ಹಾಗೂ ಮಾಲು ಮತ್ತು ವಾಹನವನ್ನು ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ವಾಹನದ ಮಾಲೀಕರು ಆಕ್ಷೇಪಣೆಯನ್ನು ಪ್ರಾಧಿಕಾರದ ಮುಂದೆ ಸಲ್ಲಿಸದೇ ಇರುವ ಕಾರಣ, ವಿಚಾರಣೆಯಲ್ಲಿ ವಾಹನದ ಮಾಲೀಕರಿಗೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಯಿತು.

ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ ತಿಮ್ಮರಾಯಪ್ಪ ಬಿನ್ ಚಿಕ್ಕರಂಗಯ್ಯ, ವಲಯ ಅರಣ್ಯಾಧಿಕಾರಿ, ಶ್ರೀ ಎಂ. ಶಂಕರ್ ಬಿನ್ ಲೇಟ್. ಮೋಟಪ್ಪ, ಉಪ ವಲಯ ಅರಣ್ಯಾಧಿಕಾರಿ, ಶ್ರೀ ವಿ. ಚಂದ್ರಪ್ಪ ಬಿನ್ ಲೇಟ್ ವೆಂಕಟೇಶ್, ಉಪ ವಲಯ ಅರಣ್ಯಾಧಿಕಾರಿ ಹಾಗೂ ಶ್ರೀ ಎಸ್ ಮಂಜುನಾಥ್ ಬಿನ್ ಶ್ರೀನಿವಾಸಲು ಸಿ. ಉಪ ವಲಯ ಅರಣ್ಯಾಧಿಕಾರಿ ಇವರುಗಳ ಮುಖ್ಯ ವಿಚಾರಣೆಯನ್ನು ಸಹಾಯಕ ಸರ್ಕಾರಿ

ಅಭಿಯೋಗ ನಿರ್ದೇಶಕರವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ನಡೆಸಿರುತ್ತಾರೆ.

ಸರ್ಕಾರಿ ಪರ ಹಾಜರಿದ್ದ ಎಲ್ಲಾ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ ಅಶೋಕ್ ಲೇಲ್ಯಾಂಡ್ ಕಂಪನಿಯ ಲಾರಿ ನೋಂದಣಿ ಸಂಖ್ಯೆ: ಎಡಿಡಿ–3805 ಒಳಗೊಂಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹಾಗೂ ವಾಹನದ ವಾರಸುದಾರರು ಯಾವುದೇ ಆಕ್ಷೇಪಣೆಯನ್ನು ಸಲ್ಲಿಸದೇ ಇರುವ ಕಾರಣ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ಅಭಿಯೋಗ ನಿರ್ದೇಶಕರು ವಾದವನ್ನು ಮಂಡಿಸಿರುತ್ತಾರೆ.

ಪ್ರಕರಣದ ಬಗ್ಗೆ ಸರ್ಕಾರಿ ಅಭಿಯೋಗ ನಿರ್ದೇಶಕರು ಮಂಡಿಸಿದ ವಾದ ಮತ್ತು ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆಧಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಿದ್ದು, ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

1. ಅಶೋಕ್ ಲೇಲ್ಯಾಂಡ್ ಕಂಪನಿಯ ಲಾರಿ ನೋಂದಣಿ ಸಂಖ್ಯೆ–ಎಡಿಡಿ–3805 ವಾಹನವು ಕರ್ನಾಟಕ ಅರಣ್ಯ ಕಾಯ್ದೆ 1963 ಮತ್ತು ನಿಯಮ 1969 ಗಳ ಉಲ್ಲಂಘನೆ ಮಾಡಿ ಅಕ್ರಮವಾಗಿ ರಕ್ತಚಂದನದ ತುಂಡುಗಳನ್ನು ಸಾಗಣೆಯಲ್ಲಿ ಒಳಗೊಂಡಿರುವುದೇ?
2. ಸದರಿ ಪ್ರಕರಣದಲ್ಲಿ ಅಶೋಕ್ ಲೇಲ್ಯಾಂಡ್ ಕಂಪನಿಯ ಲಾರಿ ನೋಂದಣಿ ಸಂಖ್ಯೆ: ಎಡಿಡಿ–3805 ಅನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?
3. ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

   ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಡಂತೆ ಇರುತ್ತದೆ.
4. ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.
5. ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.
6. ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

ದಿನಾಂಕ: 18–12–2014 ರಂದು ಬೆಳಗಿನ ಜಾವ ಅಶೋಕ್ ಲೇಲ್ಯಾಂಡ್ ಕಂಪನಿಯ ಲಾರಿ ನೋಂದಣಿ ಸಂಖ್ಯೆ: ಎಡಿಡಿ–3805 ವಾಹನವನ್ನು ತಪಾಸಣೆ ಮಾಡಲು ನಿಲ್ಲಿಸುವಂತೆ ಸೂಚಿಸಲಾಗಿದೆ, ಸದರಿ ವಾಹನದ ಚಾಲಕರು ವಾಹನವನ್ನು ನಿಲ್ಲಿಸದೇ ವೇಗವಾಗಿ ಚಲಿಸಿ ನಂತರ ವಾಹನದಲ್ಲಿದ್ದ ಆಸಾಮಿಯು ಪರಾರಿಯಾಗಿರುವುದು, ವಾಹನದಲ್ಲಿ ಅಕ್ರಮವಾಗಿ 3,983 ಕೆ.ಜಿ. ತೂಕವುಳ್ಳ ಒಟ್ಟು 193 ರಕ್ತಚಂದನ ಮರದ ತುಂಡುಗಳು ಇರುವುದು ಕಂಡುಬಂದಿದ್ದು, ಅರಣ್ಯ ಕಾಯ್ದೆಯ ಪ್ರಕಾರ ಸದರಿ ಮಾಲನ್ನು ಸಾಗಣೆ ಮಾಡಲು ಇರಬೇಕಾದ ರಹದಾರಿ ಮತ್ತು ಸಂಬಂಧಪಟ್ಟ ದಾಖಲೆಗಳು ವಾಹನದಲ್ಲಿ ದೊರಕದೇ ಇರುವುದರಿಂದ ಅರಣ್ಯ ಮೊಕದ್ದಮೆಯು ದಾಖಲಾಗಿದ್ದು, ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 ಬಿ ರಡಿ ಕಾರಣ ಕೇಳುವ ನೋಟೀಸನ್ನು ಹಾಗೂ ಸದರಿ ಕಾಯ್ದೆಯ ಸೆಕ್ಷನ್ 71 ಎ ರೀತ್ಯಾ ನಡೆಸಲಾದ ನ್ಯಾಯಾಲಯದ ನಡವಳಿಗಳಲ್ಲಿ ಹಾಜರಾಗುವಂತೆ ವಾಹನದ ಮಾಲೀಕರಿಗೆ ನೋಂದಾಯಿತ ಅಂಚೆ ಮೂಲಕ ಜಾರಿ ಮಾಡಲಾದ ಸಮನ್ಸ್‌ಗಳನ್ನು ಸ್ವೀಕರಿಸಿದ್ದು, ಇದುವರೆವಿಗೂ ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯದ ಸಂಚಾರಿ ದಳ, ಬೆಂಗಳೂರುರವರ ಸಮಕ್ಷಮ ಹಾಜರಾಗಲು ವಿಫಲರಾಗಿರುವುದರಿಂದ ಹಾಗೂ ಮಾಲು ಮತ್ತು ವಾಹನವನ್ನು ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ವಾಹನದ ಮಾಲೀಕರು ಆಕ್ಷೇಪಣೆಯನ್ನು ಪ್ರಾಧಿಕಾರದ ಮುಂದೆ ಸಲ್ಲಿಸಿರುವುದಿಲ್ಲ.

ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ವಾಹನವು ಅಕ್ರಮವಾಗಿ 3,983 ಕೆ.ಜಿ. ತೂಕವುಳ್ಳ ಒಟ್ಟು 193 ರಕ್ತಚಂದನ ಮರದ ತುಂಡುಗಳನ್ನು ಸಾಗಣೆ ಮಾಡುತ್ತಿದ್ದುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆದುದರಿಂದ ಸದರಿ ವಾಹನವು ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ನಿಯಮ 1969ರ ಉಲ್ಲಂಘನೆ ಮಾಡಿರುವುದು ಖಾತರಿಯಾಗಿರುತ್ತದೆ.

ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71ಎ ಮೇರೆಗೆ ರಾಜ್ಯ ಸರ್ಕಾರ ಸ್ವತ್ತಾದ ರಕ್ತಚಂದನ ಮರಕ್ಕೆ ಸಂಬಂಧಪಟ್ಟ ಅರಣ್ಯ ಮೊಕದ್ದಮೆಯಲ್ಲಿ ಒಳಗೊಂಡ ವಾಹನವನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ವಾಹನವನ್ನು ಮತ್ತು ಸರ್ಕಾರದ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಎಂ. ಪುಟ್ಟಣ್ಣ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ: 58/2014–15, ದಿನಾಂಕ: 18–12–2014ರಲ್ಲಿ ಅಮಾನತ್ತುಪಡಿಸಿಕೊಂಡಿರುವ 3,983 ಕೆ.ಜಿ. ತೂಕವುಳ್ಳ ಒಟ್ಟು 193 ರಕ್ತಚಂದನ ಮರದ ತುಂಡುಗಳನ್ನು ಹಾಗೂ ಅಶೋಕ್ ಲೇಲ್ಯಾಂಡ್ ಕಂಪನಿಯ ಲಾರಿ ನೋಂದಣಿ ಸಂಖ್ಯೆ: ಎಡಿಡಿ–3805 ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿವಸ ದಿನಾಂಕ: 14–08–2015 ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

ಎಂ. ಪುಟ್ಟಣ್ಣ
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ
ಅರಣ್ಯ ಸಂಚಾರಿ ದಳ, ಬೆಂಗಳೂರು–560003

P.R. 928

S.C. 10

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.**
**ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ : 03/2013–14 ದಿನಾಂಕ 09/04/2013.**
**ಸಂಖ್ಯೆ: ಎ1.ಅಅಪ್ರ 71ಎ03/2013–14/ದಿನಾಂಕ: 14/09/2015.**

**ಉಪಸ್ಥಿತರು :** ಶ್ರೀ ಎಂ. ಪುಟ್ಟಣ್ಣ
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು.

**ಫಿರ್ಯಾದಿ :** ಶ್ರೀ ಎ.ಡಿ. ಅರುಣ್ ಕುಮಾರ್, ಅರಣ್ಯ ರಕ್ಷಕ ಅರಣ್ಯ ಸಂಚಾರಿ ದಳ, ಬೆಂಗಳೂರು.

**ಆರೋಪಿಗಳು :**
1) ಪಿ. ಮಸ್ತಾನ್ ಖಾನ್ ಬಿನ್ ಫಿರುಖಾನ್, ವಯಸ್ಸು–24 ವರ್ಷ, ಚಾಲಕ, ಯರ್ರಕೊಟಪಲ್ಲಿ, ಯರ್ರಕೊಟಪಲ್ಲಿ ಅಂಚೆ, ಕಾಲಕಡ, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ.
2) ಎನ್. ಹರಿಬಾಬು ಬಿನ್ ಆಂಜನೇಯಲು, ವಯಸ್ಸು–33 ವರ್ಷ, ಕ್ಲೀನರ್, ಗುಟ್ಟಮೇಡಪಲ್ಲಿ, ಕೊತ್ತಪಲ್ಲಿ ಅಂಚೆ, ವಯ ಕಲ್ಕೇರಿ, ಸದುಮಂಡಲಂ, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ.
(1ನೇ ಹಾಗೂ 2ನೇ ಆರೋಪಿಯನ್ನು ಬಂಧಿಸಿ ನ್ಯಾಯಾಲಯದ ಆದೇಶದಂತೆ ನ್ಯಾಯಾಂಗ ಬಂಧನಕ್ಕೆ ಒಳಪಡಿಸಿದೆ)

**ಅರ್ಜಿದಾರರು :** ಎಸ್ ಕೆ. ಬಾಬ್‌ಜಾನ್ ಬಿನ್ ಕಾದರ್ ಬಾಷ, ನಂ.1–698, ಕೊತ್ತಪಲ್ಲಿ, ಪೀಲರ್ ಮಂಡಲ್, ಚಿತ್ತೂರು, ಆಂಧ್ರಪ್ರದೇಶ ರಾಜ್ಯ. (ವಾಹನದ ಮಾಲೀಕರು– ಬಂಧಿಸಿರುವುದಿಲ್ಲ)

**ಪ್ರಕರಣದ ಸಾರಾಂಶ :**

ದಿನಾಂಕ: 09–04–2013 ಬೆಂಗಳೂರು ಅರಣ್ಯ ಸಂಚಾರಿ ದಳದ ಅರಣ್ಯ ರಕ್ಷಕರು ಹಳೇ ಮದ್ರಾಸ್ ರಸ್ತೆ ಅರಣ್ಯ ತನಿಖಾ ಠಾಣೆಯಲ್ಲಿ ತಪಾಸಣೆ ಕರ್ತ್ಯವ್ಯ ನಿರ್ವಹಿಸುತ್ತಿದ್ದಾಗ ಕೋಲಾರ ಕಡೆಯಿಂದ ಬೆಂಗಳೂರು ಕಡೆಗೆ ಅನುಮಾನಾಸ್ಪದವಾಗಿ ಬರುತ್ತಿದ್ದ ಒಂದು ಬಿಳಿ ಬಣ್ಣದ ಜೀಪ್ ಮಾದರಿಯ ವಾಹನವನ್ನು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ, ವಾಹನದ ಹಿಂಭಾಗದಲ್ಲಿ ಹಳೇ ಉಪಯೋಗಿಸಿದ್ದ ರಟ್ಟುಗಳನ್ನು ತುಂಬಿರುವುದು ಕಂಡುಬಂದಿತು. ಅವುಗಳ ಕೆಳಗೆ ಪರಿಶೀಲಿಸಿ ನೋಡಲಾಗಿ, ಮರದ ತುಂಡುಗಳನ್ನು ಶೇಖರಿಸಿದ್ದು ಅದರ ಗುಣಮಟ್ಟ ಹಾಗೂ ನೈಜತೆಯಿಂದಾಗಿ ಸದರಿ ಮರದ ತುಂಡುಗಳು ರಕ್ತಚಂದನ ಮರದ ತುಂಡುಗಳೆಂದು ಖಾತರಿಪಡಿಸಿಕೊಳ್ಳಲಾಯಿತು. ತದನಂತರ ಸದರಿ ಮಾಲನ್ನು ಸಾಗಾಣಿಕೆ ಮಾಡಲು ಇಲಾಖಾ ರಹದಾರಿ ಪತ್ರ ನೀಡುವಂತೆ ವಾಹನದ ಚಾಲಕನನ್ನು ಕೇಳಲಾಗಿ, ತನ್ನ ಬಳಿ ಯಾವುದೇ ವಿಧವಾದ ರಹದಾರಿ ಪತ್ರ ಇರುವುದಿಲ್ಲವೆಂದು ತಿಳಿಸಿರುತ್ತಾನೆ. ಸದರಿ ವಿಚಾರವನ್ನು ತನಿಖಾ ಠಾಣೆಯ ಸರಹದ್ದಿನಲ್ಲಿ ಗಸ್ತು ಕಾರ್ಯದಲ್ಲಿ ನಿರತರಾಗಿದ್ದ ಶ್ರೀ ಎ. ವಾಸುದೇವ, ಉಪ ವಲಯ ಅರಣ್ಯಾಧಿಕಾರಿ ಇವರಿಗೆ ದೂರವಾಣಿ ಮುಖಾಂತರ ಕರೆ ಮಾಡಿ ತಿಳಿಸಲಾಗಿ, ಸದರಿಯವರು ಸ್ಥಳಕ್ಕೆ ಹಾಜರಾಗಿ ಪರಿಶೀಲಿಸಿರುತ್ತಾರೆ.

ಈ ರೀತಿ ಅಕ್ರಮವಾಗಿ ಯಾವುದೇ ರಹದಾರಿ ಇಲ್ಲವೇ ಅರಣ್ಯ ಉತ್ಪನ್ನವನ್ನು ಸಾಗಾಣಿಕೆ ಮಾಡುವುದು ಅರಣ್ಯ ಕಾಯ್ದೆ ಉಲ್ಲಂಘನೆಯಾಗಿರುತ್ತದೆ ಎಂದು ತಿಳಿಸಿ ವಾಹನದಲ್ಲಿದ್ದ ಆಸಾಮಿಗಳ ಬಗ್ಗೆ ವಿಚಾರಿಸಲಾಗಿ, ಒಂದನೇ ಆಸಾಮಿ ಪಿ. ಮಸ್ತಾನ್ ಖಾನ್ ಬಿನ್ ಫಿರುಖಾನ್, ವಯಸ್ಸು 24 ವರ್ಷ, ಚಾಲಕ, ಯರ್ರಕೊಟ್ಟಪಲ್ಲಿ ಅಂಚೆ, ಕಲಾಕಡ, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ ಎಂದು ಹಾಗೂ ಎರಡನೇ ಆಸಾಮಿ ಎನ್. ಹರಿಬಾಬು ಬಿನ್ ಆಂಜನೇಯಲು, ವಯಸ್ಸು 33 ವರ್ಷ, ಕ್ಲೀನರ್, ಗುಟ್ಟಮೇಡಪಲ್ಲಿ, ಕೊತ್ತಪಲ್ಲಿ ಅಂಚೆ, ಸದುಮಂಡಲಂ, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ ಎಂದು ತಿಳಿಸಿರುತ್ತಾರೆ.

ವಾಹನವನ್ನು ಅಜಮಾಯಿಸಿ ನೋಡಲಾಗಿ, ವಾಹನವು ಬಿಳಿ ಬಣ್ಣದಾಗಿದ್ದು, ಟಾಟಾ ಕಂಪನಿಯ ಆರ್.ಎಕ್ಸ್ ಪಿಕ್‌ಅಪ್ ಮಾದರಿಯದ್ದಾಗಿರುತ್ತದೆ. ವಾಹನದ ಮುಂಭಾಗ ಹಾಗೂ ಹಿಂಭಾಗದಲ್ಲಿ ನೋಂದಣಿ ಸಂಖ್ಯೆಯ ನಾಮಫಲಕವಿರುವುದಿಲ್ಲ. ವಾಹನದ ಇಂಜಿನ್ ಸಂಖ್ಯೆ:BWY608933, ಚಾಸ್ಸಿ ಸಂಖ್ಯೆ: MAT478012D9B05118 ಎಂದು ನಮೂದಾಗಿರುತ್ತದೆ. ವಾಹನದ ಹಿಂಭಾಗದ ಬಾಡಿಯಲ್ಲಿ ಒಟ್ಟು 20 ರಕ್ತಚಂದನ ಮರದ ತುಂಡುಗಳನ್ನು ಶೇಖರಿಸಿದ್ದು, ಅವುಗಳನ್ನು ಪರಿಶೀಲಿಸಲಾಗಿ, ಒಟ್ಟು 0.488 ಘನ ಮೀಟರ್ ಅಳತೆ ಇರುತ್ತದೆ. ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 2(7)(ಎ), 62, 71ಎ, 79, 80 ಮತ್ತು ಕರ್ನಾಟಕ ಅರಣ್ಯ ಅಧಿನಿಯಮ 1969ರ ನಿಯಮ 144ರ ಉಲ್ಲಂಘನೆಯಾಗಿರುವುದರಿಂದ ಈ ಕೃತ್ಯಕ್ಕೆ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ: 03/2013–14 ದಾಖಲು ಮಾಡಿ ದಸ್ತಗಿರಿ ಮಾಡಲಾಗಿದ್ದ ಇಬ್ಬರು ಆರೋಪಿಗಳನ್ನು ಗೌರವಾನ್ವಿತ ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ನ್ಯಾಯಾಲಯಕ್ಕೆ ಹಾಜರುಪಡಿಸಿ, ನಂತರ ನ್ಯಾಯಾಲಯದ ಆದೇಶದಂತೆ ನ್ಯಾಯಾಂಗ ಬಂದನಕ್ಕೆ ಒಳಪಡಿಸಲಾಗಿರುತ್ತದೆ. ಸರ್ಕಾರದ ಪರ ಅಮಾನತ್ತುಪಡಿಸಿಕೊಳ್ಳಲಾದ ಟಾಟಾ ಕಂಪನಿಯ ಆರ್.ಎಕ್ಸ್ ಪಿಕ್ ಅಪ್ ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ವಾಹನವನ್ನು ಹಾಗೂ ಮಾಲನ್ನು ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಅರಣ್ಯ ಭವನದ ದಾಸ್ತಾನು ಮಳಿಗೆಯಲ್ಲಿ ಸುರಕ್ಷಿತವಾಗಿ ದಾಸ್ತಾನು ಮಾಡಲಾಗಿದೆ ಹಾಗೂ ವಾಹನವನ್ನು ಬೆಂಗಳೂರು ಅರಣ್ಯ ಸಂಚಾರಿ ದಳದ ಆವರಣದಲ್ಲಿ ಸುರಕ್ಷಿತವಾಗಿ ನಿಲ್ಲಿಸಲಾಗಿರುತ್ತದೆ.

ಪ್ರಕರಣದ ತನಿಖೆ ನಡೆಸಿದ ವಲಯ ಅರಣ್ಯಾಧಿಕಾರಿಗಳು ಅಮಾನತ್ತುಪಡಿಸಿಕೊಂಡಿರುವ ಟಾಟಾ ಕಂಪನಿಯ ಆರ್.ಎಕ್ಸ್ ಪಿಕ್‌ಅಪ್ ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ವಾಹನವನ್ನು ಹಾಗೂ ಒಟ್ಟು 0.488 ಘನ ಮೀಟರ್ ಅಳತೆಯುಳ್ಳ 20 ರಕ್ತಚಂದನ ಮರದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ಕೋರಿರುತ್ತಾರೆ. ಟಾಟಾ ಕಂಪನಿಯ ಆರ್ ಎಕ್ಸ್ ಪಿಕ್‌ಅಪ್ ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ವಾಹನದ ಮಾಲೀಕರಾದ ಎಸ್.ಕೆ. ಬಾಬ್‌ಜಾನ್ ಬಿನ್ ಕಾದರ್ ಬಾಷ, ನಂ.1–698, ಕೊತ್ತಪಲ್ಲಿ, ಪೀಲರ್ ಮಂಡಲ್, ಚಿತ್ತೂರು, ಆಂಧ್ರಪ್ರದೇಶ ರಾಜ್ಯ ಇವರು ವಕೀಲರ ಮುಖಾಂತರ ದಿನಾಂಕ: 27–05–2013 ರಂದು ದಂಡೆ ಪ್ರಕ್ರಿಯೆಯ ಸಂಹಿತೆ ಕಲಂ 451 ಮತ್ತು 457 ರಡಿ ಅರ್ಜಿ ಸಲ್ಲಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ: 03/2013–14ರಲ್ಲಿ ಅಮಾನತ್ತುಪಡಿಸಿರುವ ಆರ್.ಎಕ್ಸ್ ಪಿಕ್‌ಅಪ್ 207 ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ವಾಹನ (ತಾತ್ಕಾಲಿಕ ನೋಂದಣಿ ಸಂಖ್ಯೆ: ಎಪಿ–26–ಯುಡಿ–ಟಿಆರ್–3943) ಅನ್ನು ಮಾಲೀಕರ ವಶಕ್ಕೆ ಮಧ್ಯಂತರ ಬಿಡುಗಡೆಗೊಳಿಸುವಂತೆ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಅರ್ಜಿದಾರರ ಅರ್ಜಿಗೆ ಸರ್ಕಾರಿ ಪರ ಸಹಾಯಕ ಅಭಿಯೋಗ ನಿರ್ದೇಶಕರು ದಿನಾಂಕ: 24–06–2014 ರಂದು ಫಿರ್ಯಾದಿ ಪರ ಆಕ್ಷೇಪಣಾ ಅರ್ಜಿ ಸಲ್ಲಿಸಿ ಅರ್ಜಿದಾರರಿಗೆ ಸೇರಿದ್ದು ಎಂದು ಹೇಳಲಾದ ನೋಂದಣಿ ಸಂಖ್ಯೆ ನಾಮಪಲಕವಿಲ್ಲದ ಆರ್.ಎಕ್ಸ್ ಪಿಕ್‌ಅಪ್ 207 ವಾಹನ (ತಾತ್ಕಾಲಿಕ ನೋಂದಣಿ

ಸಂಖ್ಯೆ: ಎಪಿ–26–ಯುಡಿ–ಟಿಆರ್–3943) ರಲ್ಲಿ ದಿನಾಂಕ: 09-04-2013 ರಂದು ಬೆಳಿಗ್ಗೆ ಅಕ್ರಮವಾಗಿ 0.488 ಘನ ಮೀಟರ್ ಅಳತೆಯುಳ್ಳ 20 ರಕ್ತಚಂದನ ಮರದ ತುಂಡುಗಳನ್ನು ಸಾಗಾಣಿಕೆ ಮಾಡುತ್ತಿದ್ದ ಸಮಯದಲ್ಲಿ ತನಿಖಾ ಠಾಣೆಯ ಬಳಿ ತಪಾಸಣೆ ಮಾಡಿ ಸದರಿ ವಾಹನದಲ್ಲಿ ಇದ್ದ ರಕ್ತಚಂದನ ಮರದ ತುಂಡುಗಳು ಹಾಗೂ ವಾಹನವನ್ನು ಸಾಕ್ಷಿದಾರರ ಸಮಕ್ಷಮ ಅಮಾನತ್ತುಪಡಿಸಿಕೊಂಡು ಮಾನ್ಯ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ಅರ್ಜಿದಾರರಿಗೆ ಸೇರಿದ ವಾಹನದಲ್ಲಿ ಆರೋಪಿತರು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಯಾವುದೇ ಪರವಾನಗಿ ಇಲ್ಲದೆ ಸಾಗಾಟ ಮಾಡಿರುವುದು ಈವರೆಗಿನ ತನಿಖೆಯಿಂದ ದೃಢಪಟ್ಟಿರುತ್ತದೆ. ಆರೋಪಿತರು ಆಂಧ್ರಪ್ರದೇಶದ ತಾತ್ಕಾಲಿಕ ನೋಂದಣಿಯುಳ್ಳ ಸಂಖ್ಯೆ ವಾಹನವನ್ನು ಕೃತ್ಯಕ್ಕೆ ಉಪಯೋಗಿಸಿರುತ್ತಾರೆ. ಈ ವಾಹನವನ್ನು ವಿಚಾರಣೆ ಕಾಲದಲ್ಲಿ ಪಿರ್ಯಾಧಿಪರ ಗುರುತಿಸಿಕೊಳ್ಳಲು ಅತ್ಯಾವಶ್ಯವಿರುತ್ತದೆ. ಹೊರ ರಾಜ್ಯದ ತಾತ್ಕಾಲಿಕ ನೋಂದಣಿಯಾಗಿರುವ ಈ ವಾಹನವನ್ನು ಅರ್ಜಿದಾರರ ಮಧ್ಯಂತರ ವಶಕ್ಕೆ ನೀಡಿದರೆ ಅದನ್ನು ಮತ್ತೆ ತರಿಸಿಕೊಳ್ಳಲು ಕಷ್ಟಕರವಾಗುತ್ತದೆ ಹಾಗೂ ಮಧ್ಯಂತರ ವಶಕ್ಕೆ ನೀಡಿದರೆ ಇದೇ ರೀತಿಯ ಕೃತ್ಯಗಳಿಗೆ ವಾಹನವನ್ನು ಉಪಯೋಗಿಸುವ ಸಾಧ್ಯತೆ ಇರುತ್ತದೆ. ಆದ್ದರಿಂದ ಅರ್ಜಿದಾರರ ಅರ್ಜಿಯನ್ನು ವಜಾ ಮಾಡಲು ಕೋರಿರುತ್ತಾರೆ.

ಅರ್ಜಿದಾರರಿಗೆ ಈ ಪ್ರಾಧಿಕಾರವು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71ಬಿ ರಡಿ ಮೇಲೆ ತಿಳಿಸಿದ ವಾಹನ ಹಾಗೂ ಮಾಲನ್ನು 'ಏತಕ್ಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು' ಎಂಬುದಾಗಿ ದಿನಾಂಕ: 27–04–2013ರಂದು ಜಾರಿ ಮಾಡಿದ್ದ ಕಾರಣ ಕೇಳುವ ನೋಟೀಸಿಗೆ ಅರ್ಜಿದಾರರು ದಿನಾಂಕ: 27–05–2013 ರಂದು ಉತ್ತರದೊಂದಿಗೆ ದಂಡ ಪ್ರಕ್ರಿಯೆ ಸಂಹಿತೆ ಕಲಂ 451 ಮತ್ತು 457 ರಡಿ ಅರ್ಜಿಯನ್ನು ಸಲ್ಲಿಸಿ ವಾಹನವನ್ನು ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ. ದಿನಾಂಕ: 09–04–2013 ರಂದು ಕೃತ್ಯದ ಜಪ್ತಿ ಪಂಚನಾಮೆ ಮತ್ತು ಪ್ರಥಮ ವರ್ತಮಾನ ವರದಿಯನ್ನು ಪರಿಶೀಲಿಸಿದಾಗ ಫಿರ್ಯಾದಿಯು ಪಂಚನಾಮೆಯಲ್ಲಿ ತೋರಿಸಿರುವ ರಕ್ತಚಂದನ ಮರದ ತುಂಡುಗಳನ್ನು ವಾಹನದ ಸಮೇತ ಜಪ್ತಿ ಮಾಡಿ ವಶಪಡಿಸಿಕೊಂಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 62(3)ರ ಅನುಗುಣವಾಗಿರುತ್ತದೆ. ಅಲ್ಲದೇ ಕೃತ್ಯ ನಡೆದ ದಿವಸವಾಗಲೀ ಅಥವಾ ಇದುವರೆವಿಗೂ ಆಗಲೀ, ಅರ್ಜಿದಾರರಾಗಲೀ ಅಥವಾ ಆರೋಪಿಯಾಗಲೀ ಮೇಲೆ ತಿಳಿಸಿದ ರಕ್ತಚಂದನ ಮರದ ತುಂಡುಗಳನ್ನು ಸಾಗಿಸಲು ಅರಣ್ಯ ಇಲಾಖೆಯ ರಹದಾರಿ ಇರುವ ಬಗ್ಗೆ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುವುದಿಲ್ಲ. ತಾನು ವಾಹನವನ್ನು ಆರೋಪಿ ಪಿ. ಮಸ್ತಾನ್ ಖಾನ್ ಎಂಬಾತನಿಗೆ ಬಾಡಿಗೆಗಾಗಿ ಕೊಟ್ಟಿದ್ದೆ ಹಾಗೂ ವಾಹನವು ಪಿ. ಮಸ್ತಾನ್ ಖಾನ್ ಈತನ ವಶದಲ್ಲಿತ್ತು. ಬಾಡಿಗೆ ಇದ್ದಾಗಲೆಲ್ಲಾ ಪಿ. ಮಸ್ತಾನ್ ಖಾನ್ ಈತನಿಗೆ ತಿಳಿಸಿದಂತೆ ಆತನು ಕೆಲಸ ಮಾಡುತ್ತಿದ್ದುದಾಗಿ ಮತ್ತು ಬಾಡಿಗೆ ಇಲ್ಲದೇ ಇದ್ದಾಗಲೆಲ್ಲಾ ವಾಹನವು ಪಿ. ಮಸ್ತಾನ್ ಖಾನ್ ಬಳಿ ಇರುತ್ತಿತ್ತು ಎಂದು ಹೇಳುವುದನ್ನು ಬಿಟ್ಟರೆ ವಾಹನದ ಮಾಲೀಕರು ಆರೋಪಿಯ ಬಗ್ಗೆಯಾಗಲೀ, ಬಾಡಿಗೆ ಕರಾರು ಏನು, ಬಾಡಿಗೆ ಮೊತ್ತವೆಷ್ಟು ಎಂಬ ವಿವರವನ್ನು ಸಾಬೀತುಪಡಿಸುವ ಯಾವುದೇ ದಾಖಲಾತಿಗಳನ್ನು ಒದಗಿಸಿರುವುದಿಲ್ಲ.

ಈ ಅಂಶಗಳನ್ನು ಪರಿಗಣಿಸಿದಾಗ ಅರ್ಜಿದಾರ ಮತ್ತು ಆರೋಪಿ ಸೇರಿ ಈ ರಕ್ತಚಂದನ ಮರದ ತುಂಡುಗಳನ್ನು ಕಾನೂನು ಬಾಹಿರವಾಗಿ ಸಾಗಿಸುತ್ತಿದ್ದುದು ಸ್ಪಷ್ಟವಾಗುತ್ತದೆ ಮತ್ತು ಅರ್ಜಿಯಲ್ಲಿ ತಾನು ಆರೋಪಿ ಚಾಲಕನಿಗಾಗಲೀ, ಅಥವಾ ಚಾಲಕನ ಜೊತೆ ಇದ್ದ ಎರಡನೇ ಆರೋಪಿ ಎನ್. ಹರಿಬಾಬುವಿಗಾಗಲೀ ತಮ್ಮ ವಾಹನದಲ್ಲಿ ಯಾವ ವಸ್ತುಗಳನ್ನು ಯಾವ ನಿಬಂಧನೆಗಳ ಮೇಲೆ ಬಾಡಿಗೆಗೆ ಓಡಿಸಬೇಕೆಂದು ಸೂಚಿಸಿದ ಅಂಶಗಳನ್ನು ಅರ್ಜಿಯಲ್ಲಾಗಲೀ ಅಥವಾ ಇತರೆ ದಾಖಲಾತಿಗಳ ಮೂಲಕವಾಗಲೀ ಇದುವರೆವಿಗೂ ಈ ಪ್ರಾಧಿಕಾರದ ಗಮನಕ್ಕೆ ತಂದಿರುವುದಿಲ್ಲ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿದಾಗ ಆರೋಪಿಗಳು ಮತ್ತು ಅರ್ಜಿದಾರರು ಶಾಮೀಲಾಗಿ ದಿನಾಂಕ: 09–04–2013 ರಂದು ಮೇಲೆ ತಿಳಿಸಿದ ವಾಹನದಲ್ಲಿ 20 ರಕ್ತಚಂದನ ಮರದ ತುಂಡುಗಳನ್ನು ಕಾನೂನು ಬಾಹಿರವಾಗಿ ಸಾಗಿಸುತ್ತಿದ್ದುದು ಖಾತರಿಯಾದ ಕಾರಣ ನೊಂದಣಿ ಸಂಖ್ಯೆ ನಾಮಫಲಕವಿಲ್ಲದ ಆರ್.ಎಕ್ಸ್ ಪಿಕ್‌ಅಪ್ 207 ವಾಹನ (ತಾತ್ಕಾಲಿಕ ನೋಂದಣಿ ಸಂಖ್ಯೆ: ಎಪಿ–26–ಯುಡಿ–ಟಿಆರ್–3943)ಅನ್ನು ಅರ್ಜಿದಾರರ ತಾತ್ಕಾಲಿಕ ವಶಕ್ಕೆ ಕೊಡಲು ಬರುವುದಿಲ್ಲವೆಂದು ತೀರ್ಮಾನಿಸಿ ಅರ್ಜಿದಾರರು ದಿನಾಂಕ: 27–05–2013ರಂದು ದಂಡ ಪ್ರಕ್ರಿಯೆ ಸಂಹಿತೆ ಕಲಂ 451 ಮತ್ತು 457ರಲ್ಲಿ ಸಲ್ಲಿಸಿದ್ದ ಅರ್ಜಿಯನ್ನು ದಿನಾಂಕ:25–06–2015ರಂದು ತೆರೆದ ನ್ಯಾಯಾಲಯದಲ್ಲಿ ತಿರಸ್ಕರಿಸಿ ಆದೇಶ ಹೊರಡಿಸಲಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರುರವರ ಕಛೇರಿಯಿಂದ ವಾಹನದ ಮಾಲೀಕರ ವಿಳಾಸಕ್ಕೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 ಬಿ ಪ್ರಕಾರ ನೋಟೀಸನ್ನು ನೋಂದಾಯಿತ ಅಂಚೆ ಮುಖಾಂತರ ದಿನಾಂಕ: 01–07–2015 ಹಾಗೂ 20–07–2015 ರಂದು ಜಾರಿ ಮಾಡಲಾಗಿತ್ತು. ಆದರೆ, ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಸದರಿ ಜಾರಿ ಮಾಡಲಾದ ಅಂಚೆ ಲಕೋಟೆಗಳನ್ನು ಸ್ವೀಕರಿಸಿದ್ದು, ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಲು ವಿಫಲರಾಗಿರುವುದರಿಂದ ಮತ್ತು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರೀತ್ಯಾ ನಡೆಸಲಾದ ನ್ಯಾಯಾಲಯದ ನಡವಳಿಗಳಲ್ಲಿ ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರಾಗಲು ವಿಫಲರಾಗಿರುವುದರಿಂದ ವಿಚಾರಣೆಯಲ್ಲಿ ವಾಹನದ ಮಾಲೀಕರಿಗೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಯಿತು.

ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಎ.ಡಿ. ಅರುಣ್‌ಕುಮಾರ್ ಬಿನ್ ದೇವಪ್ಪ ಎ.ಬಿ. ಅರಣ್ಯ ರಕ್ಷಕ, ಶ್ರೀ ಎ. ವಾಸುದೇವ ಬಿನ್ ಲೇಟ್. ಅನಂತರಾಜು, ಉಪ ವಲಯ ಅರಣ್ಯಾಧಿಕಾರಿ ಹಾಗೂ ಶ್ರೀ ತಿಮ್ಮರಾಯಪ್ಪ ಬಿನ್ ಚಿಕ್ಕರಂಗಯ್ಯ, ವಲಯ ಅರಣ್ಯಾಧಿಕಾರಿ ಇವರುಗಳ ಮುಖ್ಯ ವಿಚಾರಣೆಯನ್ನು ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕ ರವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ನಡೆಸಿರುತ್ತಾರೆ.

ಸರ್ಕಾರಿ ಪರ ಹಾಜರಿದ್ದ ಎಲ್ಲಾ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ ಟಾಟಾ ಕಂಪನಿಯ ಆರ್.ಎಕ್ಸ್. ಪಿಕ್‌ಅಪ್ ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ವಾಹನವು ಒಳಗೊಂಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹಾಗೂ ವಾಹನದ ವಾರಸುದಾರರು ಯಾವುದೇ ಆಕ್ಷೇಪಣೆಯನ್ನು ಸಲ್ಲಿಸದೇ ಇರುವ ಕಾರಣ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ಅಭಿಯೋಗ ನಿರ್ದೇಶಕರು ವಾದವನ್ನು ಮಂಡಿಸಿರುತ್ತಾರೆ.

ಪ್ರಕರಣದ ಬಗ್ಗೆ ಸರ್ಕಾರಿ ಅಭಿಯೋಗ ನಿರ್ದೇಶಕರು ಮಂಡಿಸಿದ ವಾದ ಮತ್ತು ಹಾಜರುಪಡಿಸಿದ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆಧಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಿದ್ದು, ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

1. ಬಾಬಾ ಕಂಪನಿಯ ಆರ್.ಎಕ್ಸ್. ಪಿಕ್‌ಅಪ್ ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ವಾಹನವು ಕರ್ನಾಟಕ ಅರಣ್ಯ ಕಾಯ್ದೆ 1963 ಮತ್ತು ನಿಯಮ 1969 ಗಳ ಉಲ್ಲಂಘನೆ ಮಾಡಿ ಅಕ್ರಮವಾಗಿ ರಕ್ತಚಂದನದ ತುಂಡುಗಳನ್ನು ಸಾಗಣೆಯಲ್ಲಿ ಒಳಗೊಂಡಿರುವುದೇ?
2. ಸದರಿ ಪ್ರಕರಣದಲ್ಲಿ ಟಾಟಾ ಕಂಪನಿಯ ಆರ್.ಎಕ್ಸ್ ಪಿಕ್‌ಅಪ್ ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ: 02/ಅಸೂ/ಅಪರ.ಸಿ.ಪಿ(ಸಂಚಾರ) 2015, ದಿನಾಂಕ: 28-10-2015.**

ಬೆಂಗಳೂರು ನಗರ ಬನಶಂಕರಿ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ಬನಶಂಕರಿ 2ನೇ ಹಂತ, ಚನ್ನಮ್ಮ ವೃತ್ತ ಜಂಕ್ಷನ್‌ನಲ್ಲಿ ಇನ್‌ಪ್ರಾ ಪ್ರಾಜೆಕ್ಟ್ ಪ್ರೈ ಲಿ. ರವರು ಕಿತ್ತೂರು ರಾಣಿ ಚನ್ನಮ್ಮ ವೃತ್ತದ ಮೇಲು ಸೇತುವೆ ಕಾಮಗಾರಿ ನಡೆಸುತ್ತಿದ್ದು **4m x 2m box** ಡ್ರೈನೇಜ್ ಕಾಮಗಾರಿ ಮಾಡಲು ಅನುಮತಿ ಕೋರಿದ್ದು, ಸದರಿ ಜಂಕ್ಷನ್‌ನಲ್ಲಿ ವಾಹನಗಳ ಸಂಚಾರದ ಒತ್ತಡ ಜಾಸ್ತಿ ಇದ್ದು ಡ್ರೈನೇಜ್ ಕಾಮಗಾರಿ ನಡೆಯುವ ಸಂದರ್ಭದಲ್ಲಿ ಇದರಿಂದ ಸಾರ್ವಜನಿಕರಿಗೆ ಹಾಗೂ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗುತ್ತಿರುವುದರಿಂದ ಈ ಕೆಳಕಂಡಂತೆ ಮಾರ್ಗ ಬದಲಾವಣೆ ಮಾಡಿ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅಗತ್ಯವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಇರುವ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್.ಎಸ್.ಮೇಘರಿಖ್, ಐ.ಪಿ.ಎಸ್, ಪೊಲೀಸ್ ಕಮಿಷನರ್, ಬೆಂಗಳೂರು ನಗರ ಆದ ನಾನು ಸುಗಮ ಸಂಚಾರದ ದೃಷ್ಟಿಯಿಂದ ಈ ಕೆಳಕಂಡಂತೆ ಸಂಚಾರ ನಿರ್ಬಂಧ ಹಾಗೂ ಪರ್ಯಾಯ ವ್ಯವಸ್ಥೆಯನ್ನು ಕಲ್ಪಿಸಿ ಆದೇಶಿಸಿರುತ್ತೇನೆ.

1. ಕದಿರೇನಹಳ್ಳಿ ಪಾರ್ಕ್ ಕಡೆಯಿಂದ ಚನ್ನಮ್ಮ ವೃತ್ತದ ಕಡೆಗೆ ಬರುವ ಎಲ್ಲಾ ವಾಹನಗಳನ್ನು ನಿರ್ಬಂಧಿಸಿ ಲಘು ವಾಹನಗಳನ್ನು ಅಗ್ನಿಶಾಮಕ ದಳದ ಕಛೇರಿ ಹತ್ತಿರ ಬಲ ತಿರುವು ಪಡೆದು, ಕೆ.ಇ.ಬಿ ಕಛೇರಿ ಮುಂಭಾಗದಿಂದ ಅತ್ತಿಮಬ್ಬೆ ರಸ್ತೆಗೆ ಸೇರಿ ಎಡತಿರುವು ಪಡೆದು ಚನ್ನಮ್ಮ ವೃತ್ತ ತಲುಪಿ 100 ಅಡಿ ರಿಂಗ್‌ರಸ್ತೆ, ಕಾಮಾಕ್ಯ, ನಾಯಂಡನಹಳ್ಳಿ ಕಡೆಗೆ ಸಂಚರಿಸಲು ಅನುವು ಮಾಡಿಕೊಡಲಾಗಿದೆ.
2. ಬನಶಂಕರಿ ಬಸ್ ನಿಲ್ದಾಣದ ಕಡೆಯಿಂದ ಬರುವ ಬಿ.ಎಂ.ಟಿ.ಸಿ ಬಸ್‌ಗಳನ್ನು ಕಾಮಗಾರಿ ಮುಗಿಯುವ ವರೆಗೂ ಯಾರಬ್ ನಗರ ಜಂಕ್ಷನ್‌ನಲ್ಲಿ ಬಲ ತಿರುವು ಪಡೆಯುವಂತೆ ಮತ್ತು ಬನಶಂಕರಿ ಬಸ್ ನಿಲ್ದಾಣದಿಂದ ಎಡ ತಿರುವು ಪಡೆದು ಜೆ.ಬಿ.ಎಸ್ ಜಂಕ್ಷನ್, ಮೋನೋಟೈಪ್ ರಸ್ತೆ, ಚಕ್ರ ಜಂಕ್ಷನ್‌ನಲ್ಲಿ ಬಲ ತಿರುವು, ಬಾಟಾ ಶೋರೂಂ ಜಂಕ್ಷನ್, ಪೋಸ್ಟ್ ಆಫೀಸ್, 9ನೇ ಮುಖ್ಯರಸ್ತೆ ಜಂಕ್ಷನ್ ಎಡ ತಿರುವು, ಅರವಿಂದ ಸೂಪರ್ ಬಜಾರ್, ಇಂದಿರಾ ನರ್ಸಿಂಗ್ ಹೋಂ ಜಂಕ್ಷನ್, ಕಿಮ್ಸ್ ಕಾಲೇಜ್, ಅತ್ತಿಮಬ್ಬೆ ಜಂಕ್ಷನ್ ಮಾರ್ಗವಾಗಿ ಚನ್ನಮ್ಮ ವೃತ್ತಕ್ಕೆ ತಲುಪುವಂತೆ ಚಲಿಸಲು ಅನುವು ಮಾಡಿಕೊಡಲಾಗಿದೆ.

ಅಂತೆಯೇ ಕಲಂ 116 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 28-10-2015 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

**PR- 973**

ಎನ್.ಎಸ್.ಮೇಘರಿಖ್
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಸಹಕಾರ ಸಂಘಗಳ ನಿಬಂಧಕರವರು, ಕರ್ನಾಟಕ ರಾಜ್ಯ, ನಂ.1 ಅಲಿ ಆಸ್ಕರ್ ರಸ್ತೆ, ಬೆಂಗಳೂರು-52 ಇವರ ನ್ಯಾಯಾಲಯ,**

**ದಾವಾ ಸಂಖ್ಯೆ: ಆರ್‌ಸಿಎಸ್/ಡಿ-4/ಡಿಐಎಸ್/ಸೌಹಾರ್ದ/12/2015-16.**

| ವಾದಿ | ಪ್ರತಿವಾದಿಗಳು |
|---|---|
| ಶ್ರೀಕಾಂತ್, ಸಮಾಪನಾಧಿಕಾರಿ<br>ಶ್ರೀ ಶಕ್ತಿ ಕ್ರೆಡಿಟ್ ಸೌಹಾರ್ದ ಸಹಕಾರಿ ನಿ,<br>**ವಿಳಾಸ**<br>ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿ. ನಿಯಮಿತ, ನಿರ್ಮಾಣ ಭವನ, ಡಾ: ರಾಜ್‌ಕುಮಾರ್ ರಸ್ತೆ,<br>1 ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10. | ಶ್ರೀ ಎ.ಎನ್.ಕುಮಾರ್.<br>ತಂದೆ. ಅಶ್ವಥನಾರಾಯಣ,<br>ಮನೆ ನಂ:171/I, 6ನೇ ಕ್ರಾಸ್, 8ನೇ ಮುಖ್ಯ ರಸ್ತೆ,<br>ಮಲ್ಲೇಶ್ವರಂ, ಬೆಂಗಳೂರು-03. |

ವಾದಿಯು ಈ ದಾವೆಯನ್ನು ಪ್ರತಿವಾದಿಯ ವಿರುದ್ಧ ದಾಖಲಿಸಿ ಪ್ರತಿವಾದಿಯು ವಾದಿ ಸಹಕಾರಿಯ ಆಡಳಿತ ಮಂಡಳಿಯ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದ್ದ ಅವಧಿಯಲ್ಲಿ ವಾದಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿದ್ದ ಠೇವಣಿ ಹಣ ಹಾಗೂ ಇತರೆ ನಿಧಿಗಳನ್ನು ದುರುಪಯೋಗಪಡಿಸಿದ್ದು, ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ ಠೇವಣಿ ಹಣದ ಭದ್ರತೆಯ ಹಿತದೃಷ್ಟಿಯಿಂದ ಪ್ರತಿವಾದಿಯವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡದಂತೆ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶವನ್ನು ವಾದಿ ಸಹಕಾರಿಯ ಹೆಸರಿನಲ್ಲಿ ಹೊರಡಿಸಲು ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ಅರ್ಜಿದಾರರು ತಮ್ಮ ದಾವಾ ಅರ್ಜಿಯಲ್ಲಿ ವಾದಿ ಸಹಕಾರಿಯನ್ನು ಸಮಾಪನೆಗೊಳಿಸಿದ್ದು, ಪ್ರತಿವಾದಿಗಳು ಸಮಾಪನೆಯಾದ ಆಡಳಿತ ಮಂಡಳಿಯ ಸದಸ್ಯರಾಗಿದ್ದರು, ಪ್ರತಿವಾದಿಯು ಸಹಕಾರಿಯ ನಿಧಿಗಳಿಂದ ಷೆಡ್ಯುಲ್ ಸ್ವತ್ತನ್ನು ಖರೀದಿಸಿದ್ದಾರೆಂದು ವಾದಿಯು ದಾವಾ ಅರ್ಜಿಯಲ್ಲಿ ಹೇಳಿರುತ್ತಾರೆ. ಹೀಗೆ ಖರೀದಿಸಿದ ಸದರಿ ಸ್ವತ್ತನ್ನು ಪ್ರತಿವಾದಿಯು ಪರಭಾರೆ ಮಾಡುವ ಸಾಧ್ಯತೆ ಇರುವ ಕಾರಣ ಸಮಾಪನಾಧಿಕಾರಿಗಳು ಸಹಕಾರಿಯ ಸ್ವತ್ತನ್ನು ಕಾಪಾಡಲು ಷೆಡ್ಯುಲ್ ಸ್ವತ್ತನ್ನು ಅರ್ಜಿದಾರರ ಸಂಸ್ಥೆಗೆ ವರ್ಗಾಯಿಸಲು ಪ್ರತಿವಾದಿಗೆ ನಿರ್ದೇಶನ ನೀಡಲು ಕೋರಿ ದಾವೆ ಹೂಡಿರುವುದಾಗಿ ಅರ್ಜಿಯಲ್ಲಿ ಹೇಳಿರುತ್ತಾರೆ. ಷೆಡ್ಯುಲ್ ಸ್ವತ್ತನ್ನು ಪ್ರತಿವಾದಿಯು ಪರಭಾರೆ ಮಾಡಿದಲ್ಲಿ ಮುಂದೆ ದಾವೆಯನ್ನು ಪರಿಗಣಿಸಿ ಆದೇಶ ಹೊರಡಿಸಿದರೂ ಅದು ನಿರರ್ಥಕವಾಗುವುದಾಗಿ ಹೇಳಿ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಅರ್ಜಿದಾರರ ಅರ್ಜಿಯನ್ನು ಪುರಸ್ಕರಿಸಲು ಯೋಗ್ಯವಾದ ಪ್ರಕರಣವೆಂದು ಪರಿಗಣಿಸಿ, ಸದರಿ ಪ್ರತಿವಾದಿಯು ಸಹಕಾರಿಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರದ ಅವಧಿಯಲ್ಲಿ ಪ್ರತಿವಾದಿಯು ಆಡಳಿತ ಮಂಡಳಿಯ ಸದಸ್ಯರಾಗಿ ಕಾರ್ಯನಿರ್ವಹಿಸಿರುವ ಹಿನ್ನೆಲೆಯಲ್ಲಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ, ಠೇವಣಿ ಹಣದ ಭದ್ರತೆಯ ಹಿತದೃಷ್ಟಿಯಿಂದ ಪ್ರತಿವಾದಿಯವರಿಗೆ ಸೇರಿದ ಸ್ಥಿರಾಸ್ತಿಯನ್ನು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರ ರೀತ್ಯಾ ತೀರ್ಪು ಪೂರ್ವ ಜಪ್ತಿ ಆದೇಶ ನೀಡುವುದು ಸೂಕ್ತವೆಂದು ಪರಿಗಣಿಸಿ ಈ ನೋಟೀಸ್ ಹೊರಡಿಸಲಾಗಿದೆ.

**ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪುಪೂರ್ವ ಜಪ್ತಿ ಆದೇಶದ ನೋಟೀಸ್**

ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಿದೆ, ಪ್ರತಿವಾದಿಯು ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ಪರಭಾರೆ ಮಾಡದಂತೆ, ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44(1)ರ ಷರತ್ತಿಗೊಳಪಟ್ಟು ತೀರ್ಪು ಪೂರ್ವ ಜಪ್ತಿ ಆದೇಶ ಮಾಡಿ ಆದೇಶಿಸಿದೆ ಈ ಆದೇಶದ ಬಗ್ಗೆ ಪ್ರತಿವಾದಿಯು ತನ್ನ ಆಕ್ಷೇಪಣೆ/ವಿವರಣೆ ಸಲ್ಲಿಸಲು ಉದ್ದೇಶಿಸಿದ್ದಲ್ಲಿ ಈ ಆದೇಶವನ್ನು ಪಡೆದ ಒಂದು ತಿಂಗಳೊಳಗೆ ಆಕ್ಷೇಪಣೆಗೆ/ವಿವರಣೆ ಸಲ್ಲಿಸಲು ಸೂಚಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದು.

ಷೆಡ್ಯೂಲ್ ಸ್ವತ್ತು :–

ಸ್ಥಿರಾಸ್ತಿ :

| ಕ್ರ.ಸಂ | ಗ್ರಾಮದ ಹೆಸರು | ಸರ್ವೆ ಸಂಖ್ಯೆ | ವಿಸ್ತೀರ್ಣ | ಚಕ್ಕುಬಂದಿ |
|---|---|---|---|---|
| 1 | Kyatungere Badavane, Chamundeswarinagar, Mandya City Mandy district. | Khata Number, D-4/4664/K T-2181 | Measuring 1 03*(39+44)/2 SQ.ft | East by: Property of Jayamma<br>West by : Road<br>North by : Remaining Land of Vendor<br>South by : Property of Ramesh |

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 07/10/2015 ರಂದು ನನ್ನ ರುಜು ಹಾಗೂ ಕಛೇರಿಯ ಮೊಹರ್ನಿಶಿಯೊಂದಿಗೆ ನೀಡಲಾಗಿದೆ.

**PR-977**

**SC-5**

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾ 19 ರಾಪಸ 2015, ಬೆಂಗಳೂರು ದಿನಾಂಕ :07–10–2015.**

ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಸ್ಥಳೀಯ ವೃಂದಗಳ ರಚನೆ, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆ) ನಿಯಮಗಳು 2013ರನ್ವಯ ಕರ್ನಾಟಕ ಪತ್ರಾಗಾರ ಇಲಾಖೆಗೆ ಸಂಬಂಧಿಸಿದಂತೆ ಗ್ರೂಪ್ 'ಎ' ವೃಂದದ ಕಿರಿಯ ಶ್ರೇಣಿಗೆ ಸೇರಿದ ಉಪನಿರ್ದೇಶಕರು, ಪತ್ರಪಾಲಕರು ಹಾಗೂ ವೈಜ್ಞಾನಿಕಾಧಿಕಾರಿ ಹುದ್ದೆಗಳಿಗೆ ರಾಜ್ಯ ಮಟ್ಟದ ಸ್ಥಳೀಯ ವೃಂದದ, ಹುದ್ದೆಗಳನ್ನು ಅನುಬಂಧದಲ್ಲಿರುವಂತೆ, ಗುರುತಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಅನ್ನಪೂರ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ).

**ಹೈದ್ರಾಬಾದ್–ಕರ್ನಾಟಕ ಮೀಸಲಾತಿ ಆದೇಶದನ್ವಯ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಗೆ ಸೃಜಿಸಬೇಕಾದ ರಾಜ್ಯಮಟ್ಟದ ಸ್ಥಳೀಯ ವೃಂದ ಶೇಕಡ 8–ಗ್ರೂಪ್–ಎ**

| ಕ್ರ ಸಂಖ್ಯೆ | ವರ್ಗ/ವೃಂದ | ಹುದ್ದೆಗಳ ವಿವರ | ವೇತನ ಶ್ರೇಣಿ (ರೂ.ಗಳಲ್ಲಿ) | ರಾಜ್ಯ ಮಟ್ಟದ ಕಛೇರಿಗೆ ಮಂಜೂರಾಗಿರುವ ಹುದ್ದೆಗಳು | ವರ್ಗೀಕರಿಸ ಬೇಕಾದ ಹುದ್ದೆಗಳ ಪ್ರಮಾಣ | ಸೃಜಿಸಬೇಕಾದ ರಾಜ್ಯ ಮಟ್ಟದ ಸ್ಥಳೀಯ ವೃಂದ | ಷರಾ |
|---|---|---|---|---|---|---|---|
| 1 | ಗ್ರೂಪ್–ಎ | ಉಪ ನಿರ್ದೇಶಕರು | 36300–53850 | 2 | 8% | 0.16=01 | 1 |
| 2 | ಗ್ರೂಪ್–ಎ | ಪತ್ರಪಾಲಕರು | 28100–50100 | 5 | 8% | 0.40=01 | 1 |
| 3 | ಗ್ರೂಪ್–ಎ | ವೈಜ್ಞಾನಿಕ ಅಧಿಕಾರಿ | 28100–50100 | 1 | 8% | 0.08=00 | 0 |

**PR. 978**

**SC. 50**

**ಜಿ.ಅನ್ನಪೂರ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ).

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾ 08 ಕರಾಗೆ 2015, ಬೆಂಗಳೂರು ದಿನಾಂಕ :19-09-2015.**

ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಸ್ಥಳೀಯ ವೃಂದಗಳ ರಚನೆ, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆ) ನಿಯಮಗಳು 2013ರ ನಿಯಮ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಗೆಜೆಟಿಯರ್ ಇಲಾಖೆಗೆ ಸಂಬಂಧಪಿಸಿದಂತೆ ಗ್ರೂಪ್ 'ಎ' ವೃಂದದ ಕಿರಿಯ ಶ್ರೇಣಿಗೆ ಸೇರಿದ ಮುಖ್ಯ ಸಂಪಾದಕರು ಹಾಗೂ ಹಿರಿಯ ಸಂಪಾದಕರ ವೃಂದದಲ್ಲಿ ರಾಜ್ಯ ಮಟ್ಟದ ವೃಂದದ ಹುದ್ದೆಗಳನ್ನು ಅನುಬಂಧದಲ್ಲಿರುವಂತೆ, ಗುರುತಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಅನ್ನಪೂರ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ).

### ಕರ್ನಾಟಕ ಗ್ಯಾಜೆಟಿಯರ್ ಇಲಾಖೆ

### ಅನುಬಂಧ

| ಕ್ರಸಂ | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದ ಬಲ (ವೃ.ಮತ್ತು ನೇ.ನಿ.ಯ ನಂತರದ ಪರಿಷ್ಕರಣೆ ಸಹಿತ) | ಮುಂಬಡ್ತಿ | ನೇರ ನೇಮಕಾತಿ | ನಿಯೋಜನೆ | ಸ್ಥಳೀಯ ವೃಂದದಲ್ಲಿ ಹೈ-ಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ.8ರಷ್ಟು ಹುದ್ದೆಗಳು | | |
|---|---|---|---|---|---|---|---|---|---|
| | | | | | | | ಮುಂಬಡ್ತಿ | ನೇ.ನೇ | ಒಟ್ಟು |
| ಗ್ರೂಪ್-ಎ ವೃಂದ | | | | | | | | | |
| 1 | 2 | 3 | 4 | 5 | | | 6 | 7 | 8 |
| 1 | ಮುಖ್ಯ ಸಂಪಾದಕರು | 40,050-56,550 | 1 | (ಶ್ರೇ. 100 ಮುಂಬಡ್ತಿ) | | | – | – | – |
| | | | | 1 | – | – | | | |
| 2 | ಹಿರಿಯ ಸಂಪಾದಕರು | 28,100-50,100 | | (ಶ್ರೇ. 100 ಮುಂಬಡ್ತಿ) | | | | | |
| | | | 2 | 2 | – | – | 1 | – | 1 |

PR. 979
SC. 50

**ಜಿ.ಅನ್ನಪೂರ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ).

## ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ ನಂ.1 ಅಲಿ ಆಸ್ಕರ್ ರಸ್ತೆ, ಬೆಂಗಳೂರು-52 ಇವರ ನ್ಯಾಯಾಲಯ,

**ದಾವಾ ಸಂಖ್ಯೆ: ಆರ್‌ಸಿಎಸ್/ಡಿ-4/ಡಿಐಎಸ್/ಸೌಹಾರ್ದ್/01/2015-16.**

| ವಾದಿ | ಪ್ರತಿವಾದಿಗಳು |
|---|---|
| ಶ್ರೀಕಾಂತ್, ಸಮಾಪನಾಧಿಕಾರಿ<br>ಶ್ರೀ ಶಕ್ತಿ ಕ್ರೆಡಿಟ್ ಸೌಹಾರ್ದ ಸಹಕಾರಿ ನಿ,<br>ವಿಳಾಸ<br>ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿ.<br>ನಿಯಮಿತ, ನಿರ್ಮಾಣ ಭವನ, ಡಾ: ರಾಜ್ ಕುಮಾರ್ ರಸ್ತೆ,<br>1 ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10. | ಶ್ರೀ ಎ.ಎನ್.ಕುಮಾರ್.<br>ತಂದೆ. ಅಶ್ವಥನಾರಾಯಣ,<br>ಮನೆ ನಂ:171/1, 6ನೇ ಕ್ರಾಸ್, 8ನೇ ಮುಖ್ಯ ರಸ್ತೆ,<br>ಮಲ್ಲೇಶ್ವರಂ, ಬೆಂಗಳೂರು-03. |

ವಾದಿಯು ಈ ದಾವೆಯನ್ನು ಪ್ರತಿವಾದಿಯ ವಿರುದ್ಧ ದಾಖಲಿಸಿ ಪ್ರತಿವಾದಿಯು ವಾದಿ ಸಹಕಾರಿಯ ಆಡಳಿತ ಮಂಡಳಿಯ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದ್ದ ಅವಧಿಯಲ್ಲಿ ವಾದಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿದ್ದ ಠೇವಣಿ ಹಣ ಹಾಗೂ ಇತರೆ ನಿಧಿಗಳನ್ನು ದುರುಪಯೋಗಪಡಿಸಿದ್ದು, ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ ಠೇವಣಿ ಹಣದ ಭದ್ರತೆಯ ಹಿತದೃಷ್ಟಿಯಿಂದ ಪ್ರತಿವಾದಿಯವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡದಂತೆ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶವನ್ನು ವಾದಿ ಸಹಕಾರಿಯ ಹೆಸರಿನಲ್ಲಿ ಹೊರಡಿಸಲು ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ಅರ್ಜಿದಾರರು ತಮ್ಮ ದಾವಾ ಅರ್ಜಿಯಲ್ಲಿ ವಾದಿ ಸಹಕಾರಿಯನ್ನು ಸಮಾಪನೆಗೊಳಿಸಿದ್ದು,

ಪ್ರತಿವಾದಿಗಳು ಸಮಾಪನೆಯಾದ ಆಡಳಿತ ಮಂಡಳಿಯ ಸದಸ್ಯರಾಗಿದ್ದರು, ಪ್ರತಿವಾದಿಯು ಸಹಕಾರಿಯ ನಿಧಿಗಳಿಂದ ಷೆಡ್ಯುಲ್ ಸ್ವತ್ತುನ್ನು ಖರೀದಿಸಿದ್ದಾರೆಂದು ವಾದಿಯು ದಾವಾ ಅರ್ಜಿಯಲ್ಲಿ ಹೇಳಿರುತ್ತಾರೆ, ಹೀಗೆ ಖರೀದಿಸಿದ ಸದರಿ ಸ್ವತ್ತುನ್ನು ಪ್ರತಿವಾದಿಯು ಪರಭಾರೆ ಮಾಡುವ ಸಾಧ್ಯತೆ ಇರುವ ಕಾರಣ ಸಮಾಪನಾಧಿಕಾರಿಗಳು ಸಹಕಾರಿಯ ಸ್ವತ್ತುನ್ನು ಕಾಪಾಡಲು ಷೆಡ್ಯುಲ್ ಸ್ವತ್ತುನ್ನು ಅರ್ಜಿದಾರರ ಸಂಸ್ಥೆಗೆ ವರ್ಗಾಯಿಸಲು ಪ್ರತಿವಾದಿಗೆ ನಿರ್ದೇಶನ ನೀಡಲು ಕೋರಿ ದಾವೆ ಹೂಡಿರುವುದಾಗಿ ಅರ್ಜಿಯಲ್ಲಿ ಹೇಳಿರುತ್ತಾರೆ. ಷೆಡ್ಯುಲ್ ಸ್ವತ್ತುನ್ನು ಪ್ರತಿವಾದಿಯು ಪರಭಾರೆ ಮಾಡಿದಲ್ಲಿ ಮುಂದೆ ದಾವೆಯನ್ನು ಪರಿಗಣಿಸಿ ಆದೇಶ ಹೊರಡಿಸಿದರೂ ಅದು ನಿರರ್ಥಕವಾಗುವುದಾಗಿ ಹೇಳಿ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಅರ್ಜಿದಾರರ ಅರ್ಜಿಯನ್ನು ಪುರಸ್ಕರಿಸಲು ಯೋಗ್ಯವಾದ ಪ್ರಕರಣವೆಂದು ಪರಿಗಣಿಸಿ, ಸದರಿ ಪ್ರತಿವಾದಿಯು ಸಹಕಾರಿಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರದ ಅವಧಿಯಲ್ಲಿ ಪ್ರತಿವಾದಿಯು ಆಡಳಿತ ಮಂಡಳಿಯ ಸದಸ್ಯರಾಗಿ ಕಾರ್ಯನಿರ್ವಹಿಸಿರುವ ಹಿನ್ನೆಲೆಯಲ್ಲಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ, ಠೇವಣಿ ಹಣದ ಭದ್ರತೆಯ ಹಿತದೃಷ್ಟಿಯಿಂದ ಪ್ರತಿವಾದಿಯವರಿಗೆ ಸೇರಿದ ಸ್ಥಿರಾಸ್ತಿಯನ್ನು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರ ರೀತ್ಯಾ ತೀರ್ಪು ಪೂರ್ವ ಜಪ್ತಿ ಆದೇಶ ನೀಡುವುದು ಸೂಕ್ತವೆಂದು ಪರಿಗಣಿಸಿ ಈ ನೋಟೀಸ್ ಹೊರಡಿಸಲಾಗಿದೆ.

**ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪುಪೂರ್ವ ಜಪ್ತಿ ಆದೇಶದ ನೋಟೀಸ್**

ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಿದೆ, ಪ್ರತಿವಾದಿಯು ಈ ಕೆಳಕಂಡ ಷೆಡ್ಯುಲ್ ಸ್ವತ್ತನ್ನು ಪರಭಾರೆ ಮಾಡದಂತೆ, ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44(1)ರ ಷರತ್ತಿಗೊಳಪಟ್ಟು ತೀರ್ಪು ಪೂರ್ವ ಜಪ್ತಿ ಆದೇಶ ಮಾಡಿ ಆದೇಶಿಸಿದೆ ಈ ಆದೇಶದ ಬಗ್ಗೆ ಪ್ರತಿವಾದಿಯು ತನ್ನ ಆಕ್ಷೇಪಣೆ/ವಿವರಣೆ ಸಲ್ಲಿಸಲು ಉದ್ದೇಶಿಸಿದಲ್ಲಿ ಈ ಆದೇಶವನ್ನು ಪಡೆದ ಒಂದು ತಿಂಗಳೊಳಗೆ ಆಕ್ಷೇಪಣೆ/ ವಿವರಣೆ ಸಲ್ಲಿಸಲು ಸೂಚಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದು.

**ಷೆಡ್ಯೂಲ್ ಸ್ವತ್ತು:–**

ಸ್ಥಿರಾಸ್ತಿ :

| ಕ್ರಸಂ | ಗ್ರಾಮದ ಹೆಸರು | ಸರ್ವೆ ಸಂಖ್ಯೆ | ವಿಸ್ತೀರ್ಣ | ಚಕ್ಕುಬಂದಿ |
|---|---|---|---|---|
| 1 | Myakala channenahalli Village, yashwanthpura Hobli, Bangalore North Taluk, B B M P jalahalli Ward no. 16, | Plot no. 2<br>Khata no. 761/2<br>Assesment no.1<br>Measuring 50*60 | Plot no. 2<br>Khata no. 761/2<br>Assesment no.1<br>Measuring 50*60<br>3000 SQ.ft | East by: Private Property<br>West by : Road<br>North by : Plot no.3<br>South by : Drainage |

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 7/10/2015 ರಂದು ನನ್ನ ರುಜು ಹಾಗೂ ಕಛೇರಿಯ ಮೊಹರ್ನಿಶಿಯೊಂದಿಗೆ ನೀಡಲಾಗಿದೆ.

**PR-980** ಸಹಕಾರ ಸಂಘಗಳ ನಿಬಂಧಕರು,

**SC-5** ಕರ್ನಾಟಕ ರಾಜ್ಯ, ಬೆಂಗಳೂರು.

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ ನಂ.1 ಅಲಿ ಆಸ್ಕರ್ ರಸ್ತೆ, ಬೆಂಗಳೂರು–52 ಇವರ ನ್ಯಾಯಾಲಯ, ದಾವಾ ಸಂಖ್ಯೆ: ಆರ್‌ಸಿಎಸ್/ಡಿ–4/ಡಿಐಎಸ್/ಸೌಹಾರ್ದ್/02/2015–16.**

| ವಾದಿ | ಪ್ರತಿವಾದಿಗಳು |
|---|---|
| ಶ್ರೀಕಾಂತ್, ಸಮಾಪನಾಧಿಕಾರಿ<br>ಶ್ರೀ ಶಕ್ತಿ ಕ್ರೆಡಿಟ್ ಸೌಹಾರ್ದ ಸಹಕಾರಿ ನಿ,<br>**ವಿಳಾಸ**<br>ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿ.<br>ನಿಯಮಿತ, ನಿರ್ಮಾಣ ಭವನ, ಡಾ: ರಾಜ್ ಕುಮಾರ್ ರಸ್ತೆ,<br>1 ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10. | ಶ್ರೀಮತಿ ಲಕ್ಷ್ಮೀ. ಕೆ.<br>ಕೋಂ ಎ.ಎನ್. ಕುಮಾರ್,<br>ಮನೆ ನಂ:171/1, 6ನೇ ಕ್ರಾಸ್, 8ನೇ ಮುಖ್ಯ ರಸ್ತೆ,<br>ಮಲ್ಲೇಶ್ವರಂ, ಬೆಂಗಳೂರು–03. |

ವಾದಿಯು ಈ ದಾವೆಯನ್ನು ಪ್ರತಿವಾದಿಯ ವಿರುದ್ಧ ದಾಖಲಿಸಿ ಪ್ರತಿವಾದಿಯು ವಾದಿ ಸಹಕಾರಿಯ ಅಧ್ಯಕ್ಷರಾಗಿದ್ದ ಎ.ಎನ್.ಕುಮಾರ್ ಇವರ ಪತ್ನಿಯಾಗಿದ್ದು, ವಾದಿ ಸಹಕಾರಿಯಲ್ಲಿ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದ್ದ ಈ ಅವಧಿಯಲ್ಲಿ ವಾದಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿದ್ದ ಠೇವಣಿ ಹಣ ಹಾಗೂ ಇತರೆ ನಿಧಿಗಳನ್ನು ದುರುಪಯೋಗಪಡಿಸಿದ್ದು, ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ ಠೇವಣಿ ಹಣದ ಭದ್ರತೆಯ ಹಿತದೃಷ್ಟಿಯಿಂದ ಪ್ರತಿವಾದಿಯವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡದಂತೆ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶವನ್ನು ವಾದಿ ಸಹಕಾರಿಯ ಹೆಸರಿನಲ್ಲಿ ಹೊರಡಿಸಲು ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ಅರ್ಜಿದಾರರು ತಮ್ಮ ದಾವಾ ಅರ್ಜಿಯಲ್ಲಿ ವಾದಿ ಸಹಕಾರಿಯ ಆಡಳಿತ ಮಂಡಳಿಯನ್ನು ಸಮಾಪನೆಗೊಳಿಸಿದ್ದು, ಪ್ರತಿವಾದಿಯು ಸಮಾಪನೆಯಾದ ಸಹಕಾರಿಯ ಅಧ್ಯಕ್ಷರಾಗಿದ್ದ ಎ.ಎನ್.ಕುಮಾರ್ ಇವರ ಪತ್ನಿಯಾಗಿದ್ದು, ವಾದಿ ಸಹಕಾರಿಯಲ್ಲಿ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದ್ದರು ಪ್ರತಿವಾದಿಯು ಸಹಕಾರಿಯ ನಿಧಿಗಳಿಂದ ಷೆಡ್ಯುಲ್ ಸ್ವತ್ತುಗಳನ್ನು ಖರೀದಿಸಿದ್ದಾರೆಂದು ವಾದಿಯು ದಾವಾ ಅರ್ಜಿಯಲ್ಲಿ ಹೇಳಿರುತ್ತಾರೆ, ಹೀಗೆ ಖರೀದಿಸಿದ ಸದರಿ ಸ್ವತ್ತುಗಳನ್ನು ಪ್ರತಿವಾದಿಯು ಪರಭಾರೆ ಮಾಡುವ ಸಾಧ್ಯತೆ ಇರುವ ಕಾರಣ ಸಮಾಪನಾಧಿಕಾರಿಗಳು ಸಹಕಾರಿಯ ಸ್ವತ್ತುಗಳನ್ನು ಕಾಪಾಡಲು ಷೆಡ್ಯುಲ್ ಸ್ವತ್ತುಗಳನ್ನು ಅರ್ಜಿದಾರರ ಸಂಸ್ಥೆಗೆ ವರ್ಗಾಯಿಸಲು ಪ್ರತಿವಾದಿಗೆ ನಿರ್ದೇಶನ ನೀಡಲು ಕೋರಿ ದಾವೆ ಹೂಡಿರುವುದಾಗಿ ಅರ್ಜಿಯಲ್ಲಿ ಹೇಳಿರುತ್ತಾರೆ. ಷೆಡ್ಯುಲ್ ಸ್ವತ್ತುಗಳನ್ನು ಪ್ರತಿವಾದಿಯು

ಪರಭಾರೆ ಮಾಡಿದಲ್ಲಿ ಮುಂದೆ ದಾವೆಯನ್ನು ಪರಿಗಣಿಸಿ ಆದೇಶ ಹೊರಡಿಸಿದರೂ ಅದು ನಿರರ್ಥಕವಾಗುವುದಾಗಿ ಹೇಳಿ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಅರ್ಜಿದಾರರ ಅರ್ಜಿಯನ್ನು ಪುರಸ್ಕರಿಸಲು ಯೋಗ್ಯವಾದ ಪ್ರಕರಣವೆಂದು ಪರಿಗಣಿಸಿ, ಸದರಿ ಪ್ರತಿವಾದಿಯು ಸಮಾಪನೆಯಾದ ಸಹಕಾರಿಯ ಅಧ್ಯಕ್ಷರಾಗಿದ್ದ ಎ.ಎನ್.ಕುಮಾರ್ ಇವರ ಪತ್ನಿಯಾಗಿದ್ದು, ವಾದಿ ಸಹಕಾರಿಯಲ್ಲಿ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿರುವ ಹಿನ್ನೆಲೆಯಲ್ಲಿ ಸಹಕಾರಿಯಲ್ಲಿ ಸದಸ್ಯರು ಹೂಡಿಕೆ ಮಾಡಿರುವ, ಠೇವಣಿ ಹಣದ ಭದ್ರತೆಯ ಹಿತದೃಷ್ಠಿಯಿಂದ ಪ್ರತಿವಾದಿಯವರಿಗೆ ಸೇರಿದ ಸ್ಥಿರಾಸ್ತಿಯನ್ನು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರ ರೀತ್ಯಾ ತೀರ್ಪು ಪೂರ್ವ ಜಪ್ತಿ ಆದೇಶ ನೀಡುವುದು ಸೂಕ್ತವೆಂದು ಪರಿಗಣಿಸಿ ಈ ನೋಟೀಸ್ ಹೊರಡಿಸಲಾಗಿದೆ.

**ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44 ರಡಿ ತೀರ್ಪುಪೂರ್ವ ಜಪ್ತಿ ಆದೇಶದ ನೋಟೀಸ್**

ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಿದೆ, ಪ್ರತಿವಾದಿಯು ಈ ಕೆಳಕಂಡ ಷೆಡ್ಯುಲ್ ಸ್ವತ್ತನ್ನು ಪರಭಾರೆ ಮಾಡದಂತೆ, ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44(1)ರ ಷರತ್ತಿಗೊಳಪಟ್ಟು ತೀರ್ಪು ಪೂರ್ವ ಜಪ್ತಿ ಆದೇಶ ಮಾಡಿ ಆದೇಶಿಸಿದೆ ಈ ಆದೇಶದ ಬಗ್ಗೆ ಪ್ರತಿವಾದಿಯು ತನ್ನ ಆಕ್ಷೇಪಣೆ/ವಿವರಣೆ ಸಲ್ಲಿಸಲು ಉದ್ದೇಶಿಸಿದಲ್ಲಿ ಈ ಆದೇಶವನ್ನು ಪಡೆದ ಒಂದು ತಿಂಗಳೊಳಗೆ ಆಕ್ಷೇಪಣೆ/ ವಿವರಣೆ ಸಲ್ಲಿಸಲು ಸೂಚಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದು.

**ಷೆಡ್ಯೂಲ್ ಸ್ವತ್ತು:–**

**ಸ್ಥಿರಾಸ್ತಿ :**

| ಕ್ರಸಂ | ಗ್ರಾಮದ ಹೆಸರು | ಸರ್ವೆ ಸಂಖ್ಯೆ | ವಿಸ್ತೀರ್ಣ | ಚಕ್ಕುಬಂದಿ |
|---|---|---|---|---|
| 1 | K.G. Chikkaballa village, Jangamakote Hobli, Shidlagatta Taluk, Chikkaballapur district | Survey Number. 27 | Measuring 1 Acre 20 guntas | East by : Remaining portion in same Survey Number<br>West by : Road<br>North by : Land of H. Ramaiah<br>South by : Land of Nagaraju |
| 2 | Gorevigere village, Bidarahalli Hobli, Bangalore East Taluk, | Survey Number. 69 | Measuring 0.2 ¾ guntas | East by : Road<br>West by : Land of Anjanappa<br>North by : Remaining Land of Vendor<br>South by : Remaining Land of Vendor |

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 7/10/2015 ರಂದು ನನ್ನ ರುಜು ಹಾಗೂ ಕಛೇರಿಯ ಮೊಹರ್ನಿಶಿಯೊಂದಿಗೆ ನೀಡಲಾಗಿದೆ.

**PR-981**
**SC-5**

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

## ಔಷಧ ನಿಯಂತ್ರಣ ಇಲಾಖೆ

### ಅಧಿಕೃತ ಜ್ಞಾಪನ

**ಸಂಖ್ಯೆ: ಔನಿಇ/97/ಸಿಬ್ಬಂದಿ/2014–2015, ಬೆಂಗಳೂರು, ದಿನಾಂಕ :23–09–2015.**

ಅಧಿಕೃತ ಜ್ಞಾಪನ ಸಂಖ್ಯೆ: ಔನಿಇ/97/ಸಿಬ್ಬಂದಿ/2014–15, ದಿನಾಂಕ: 10.07.2015ರಲ್ಲಿ ಔಷಧ ನಿಯಂತ್ರಣ ಇಲಾಖೆಯ ಔಷಧ ಪರಿವೀಕ್ಷಕರ ಹುದ್ದೆಗೆ ನೇಮಕ ಹೊಂದಿ ತರಬೇತಿಯಲ್ಲಿದ್ದ ಈ ಕೆಳಕಂಡ ಅಧಿಕಾರಿಯನ್ನು, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ಹೆಸರಿನ ಮುಂದೆ ಕಲಂ (3) ರಲ್ಲಿ ನಮೂದಿಸಿರುವ ಕಛೇರಿಗೆ **ಔಷಧ ಮತ್ತು ಕಾಂತಿವರ್ಧಕ ಕಾಯ್ದೆ 1940ರ ಸೆಕ್ಷನ್ 21ರ ಅಡಿಯಲ್ಲಿ ಪರಿವೀಕ್ಷಕರಾಗಿ** ನೇಮಿಸಿ ಸ್ಥಳನಿಯುಕ್ತಿಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಔಷಧ ಪರಿವೀಕ್ಷಕರ ಹೆಸರು | ಸ್ಥಳನಿಯುಕ್ತಿಗೊಳಿಸಿ ನೇಮಿಸಲಾದ ಕಛೇರಿ ಹಾಗೂ ಹುದ್ದೆ |
|---|---|---|
| 1 | 2 | 3 |
| 1 | ಶ್ರೀ ರಮೇಶ್ ನಿಡವಣಿ | ಔಷಧ ಪರಿವೀಕ್ಷಕರು–2,<br>ಸಹಾಯಕ ಔಷಧ ನಿಯಂತ್ರಕರ ಕಛೇರಿ,<br>ಹಾಸನ ವೃತ್ತ, ಹಾಸನ.<br>– ಖಾಲಿ ಇರುವ ಹುದ್ದೆ. |

ಮೇಲ್ಕಾಣಿಸಿದ ಅಧಿಕಾರಿಯನ್ನು ದಿನಾಂಕ: 23.09.2015ರ ಅಪರಾಹ್ನದಂದು ಕೇಂದ್ರ ಕಛೇರಿಯಲ್ಲಿನ ತರಬೇತಿ ಅವಧಿಯಿಂದ ಬಿಡುಗಡೆಗೊಳಿಸಲಾಗಿದೆ.

**PR. 982**
**SC. 25**

**(ರಘುರಾಮ ಭಂಡಾರಿ),**
ಔಷಧ ನಿಯಂತ್ರಕರು

**ಸಹಕಾರ ಸಂಘಗಳ ಉಪನಿಬಂಧಕರು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂ.ಡಿಆರ್‌ಎಸ್/ಎಸ್.ಸಿ.–01/2014–15**

| ಅರ್ಜಿದಾರರು | | ಎದುರು ಅರ್ಜಿದಾರರು |
|---|---|---|
| ಸಮಾಪನಾಧಿಕಾರಿ, ಸೊರಬ ತಾ. ಗ್ರಾಮೋದ್ಯೋಗ ಕಸುಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿ, ಸೊರಬ | ವಿರುದ್ಧ | 1) ಚಂದ್ರಪ್ಪ, ಮಾಜಿ ಕಾರ್ಯದರ್ಶಿ, ಸೊರಬ ತಾ.ಗ್ರಾಮೋದ್ಯೋಗ ಕಸುಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿ, ಸೊರಬ (ಹಾಲಿವಾಸ ಅಣಲೆಕೊಪ್ಪ, ಸಾಗರ) |
| | | 2) ರಾಮಪ್ಪ, ಪಿಗ್ಮಿ ಸಂಗ್ರಾಹಕ, ಸೊರಬ ತಾಲ್ಲೂಕು ಗ್ರಾಮೋದ್ಯೋಗ ಕಸುಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿ, ಸೊರಬ ಹಾಗೂ ಮತ್ತಿತರರು. |

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 103(2)ರನ್ವಯ ಜಪ್ತಿ ಆದೇಶ ಸ್ಥಿರೀಕರಣ**

**ಪೀಠಿಕೆ :–**

1. ಅರ್ಜಿದಾರರು, ಅರ್ಜಿದಾರ ಸಹಕಾರ ಸಂಘದಲ್ಲಿ ಎದುರು ಅರ್ಜಿದಾರರುಗಳಿಂದ ಪಿಗ್ಮಿ ಠೇವಣಿಯಲ್ಲಿ 2011–12 ಮತ್ತು 2012–13 ರಲ್ಲಿ ನಡೆದಿರುವ ಅವ್ಯವಹಾರಗಳ ಬಗ್ಗೆ ತನಿಖೆಗೆ ನೇಮಕಗೊಂಡ ಸಾಗರ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ನೀಡಿದ ಕಾಯಿದೆ ಕಲಂ 64 ರಂತೆ ವಿಚಾರಣೆ ನಡೆಸಿ, ಸಲ್ಲಿಸಿದ ಶಾಸನಬದ್ಧ ವರದಿಯನ್ವಯ ರೂ.5,13,715–00 ಗಳ ದುರುಪಯೋಗವಾಗಿರುವುದು ಬೆಳಕಿಗೆ ಬಂದಿರುತ್ತದೆ. ಸದರೀ ವಿಚಾರಣಾ ವರದಿಯನ್ನು ಸಕ್ಷಮ ಪ್ರಾಧಿಕಾರ ಒಪ್ಪಿ, ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಕಲಂ 68 ರ ಆದೇಶವನ್ನು ನೀಡಿ, ಸಂಬಂಧಪಟ್ಟವರಿಂದ ದುರುಪಯೋಗದ ಮೊಬಲಗನ್ನು ವಸೂಲಾತಿ ಮಾಡಲು ಅರ್ಜಿದಾರ ಸಹಕಾರ ಸಂಘಕ್ಕೆ ನಿರ್ದೇಶನ ನೀಡಿರುತ್ತಾರೆ. ಈ ಮೇರೆಗೆ ಅರ್ಜಿದಾರ ಸಹಕಾರ ಸಂಘವು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 69 ರಂತೆ ಅದಿಭಾರ ಅರ್ಜಿಯನ್ನು ಈ ನ್ಯಾಯಾಲಯದ ಮುಂದೆ ದಾಖಲಿಸಿರುತ್ತಾರೆ. ಅರ್ಜಿದಾರ ಸಹಕಾರ ಸಂಘವು ದಾಖಲಿಸಿದ ಈ ಅದಿಭಾರ ಅರ್ಜಿಯನ್ನು ವಿಚಾರಣೆ ಕೈಗೆತ್ತಿಕೊಂಡು ಪ್ರಕರಣ ಸಂಖ್ಯೆ:ಡಿಆರ್‌ಎಸ್/ಎಸ್.ಸಿ.–01/2014–15 ರ ನಂಬರನ್ನು ನೀಡಿ, ಈ ಪ್ರಕರಣದ ಉಭಯ ಪಕ್ಷಕಾರರುಗಳಿಗೆ ಈ ನ್ಯಾಯಾಲಯದಿಂದ ದಿನಾಂಕ: 9–9–2014 ರಂದು ಮಧ್ಯಾಹ್ನ 3–00 ಗಂಟೆಗೆ ವಿಚಾರಣೆ ದಿನಾಂಕ ನಿಗಧಿಪಡಿಸಿ ಸಮನ್ಸ್‌ನ್ನು ಜಾರಿ ಮಾಡಿರುತ್ತದೆ. ಈ ಅದಿಭಾರ ವಿಚಾರಣೆಯ ಸಂದರ್ಭದಲ್ಲಿ ಅರ್ಜಿದಾರ ಸಹಕಾರ ಸಂಘವು ಸಲ್ಲಿಸಿದ ಮಧ್ಯಂತರ ಅರ್ಜಿಯಲ್ಲಿ ಈ ಅದಿಭಾರ ಅರ್ಜಿಯ 1 ಮತ್ತು 2ನೇ ಎದುರು ಅರ್ಜಿದಾರರ ಸ್ಥಿರಾಸ್ತಿಗಳನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 103 ರಂತೆ ತೀರ್ಪು ಪೂರ್ವ ಜಪ್ತು ಆದೇಶಕ್ಕೆ ಒಳಪಡಿಸಲು ಕೋರಿರುವ ಅರ್ಜಿಯೊಂದಿಗೆ ಸಲ್ಲಿಸಿರುವ ಪ್ರಮಾಣ ಪತ್ರದಲ್ಲಿ ಈ ಅಧಿಭಾರ ಅರ್ಜಿಯಲ್ಲಿನ ಮೊಬಲಗು ವಸೂಲಾತಿ ಮಾಡಲು ನ್ಯಾಯಾಲಯ ನೀಡಬಹುದಾದ ಆದೇಶದಂತೆ ಕೈಗೊಳ್ಳಬಹುದಾದ ಅಮಲ್ಜಾರಿ ಕ್ರಮದಿಂದ ತಪ್ಪಿಸಿಕೊಳ್ಳಲು 1 ಮತ್ತು 2ನೇ ಎದುರುದಾರರು ತಮ್ಮ ಸ್ಥಿರಾಸ್ತಿಗಳನ್ನು ಪರಭಾರೆ ಮಾಡುವ ಸಾಧ್ಯತೆ ಇರುತ್ತದೆ. ಒಂದು ವೇಳೆ ಅವರು ತಮ್ಮ ಸ್ಥಿರಾಸ್ತಿಗಳನ್ನು ಪರಭಾರೆ ಮಾಡಿದಲ್ಲಿ ಈ ಅದಿಭಾರ ಅರ್ಜಿಯಲ್ಲಿ ನೀಡಲಿರುವ ಆದೇಶದಂತೆ ಅರ್ಜಿದಾರ ಸಹಕಾರ ಸಂಘಕ್ಕೆ ವಸೂಲಾಗತಕ್ಕ ಮೊಬಲಗನ್ನು ವಸೂಲಿ ಮಾಡಲು ರಹ ಇಲ್ಲದಂತಾಗಿ ಸಂಘವು ವಿಪರೀತ ನಷ್ಟಕ್ಕೆ ಒಳಗಾಗುವ ಸಾಧ್ಯತೆ ಇರುತ್ತದೆ ಎಂದು ತಿಳಿಸಿರುವ ಕಾರಣಗಳನ್ನು ನ್ಯಾಯಾಲಯ ಪರಿಗಣಿಸಿದೆ ಮತ್ತು ಅರ್ಜಿದಾರ ಸಹಕಾರ ಸಂಘವು ಸಲ್ಲಿಸಿದ 1 ಮತ್ತು 2ನೇ ಎದುರುದಾರರುಗಳಿಗೆ ಸಂಬಂಧಪಟ್ಟಂತೆ ಎಲ್ಲಾ ಸ್ಥಿರಾಸ್ತಿಗಳನ್ನು ಒಳಪಡಿಸದೇ, 1ನೇ ಎದುರುದಾರರಿಗೆ ಸೇರಿದ ಒಟ್ಟು ಐದು ಸ್ಥಿರಾಸ್ತಿಗಳನ್ನು ಹಾಗೂ ಎರಡನೇ ಎದುರುದಾರರಿಗೆ ಸೇರಿದ ಒಂದು ಸ್ಥಿರಾಸ್ಥಿ ಮತ್ತು ಅವರ ತಂದೆಯ ಹೆಸರಿನಲ್ಲಿರುವ ಮೂರು ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯವು ದಿನಾಂಕ:21–03–2015 ರಂದು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103(1) ರನ್ವಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವ ಜಪ್ತುಗೊಳಿಸಿ, ಆದೇಶಿಸಿದೆ. ಮತ್ತು ಈ ಆದೇಶದಲ್ಲಿನ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ಥಿರಾಸ್ತಿಗಳನ್ನು ಷರತ್ತು ಬದ್ಧ ಆದೇಶದಲ್ಲಿ ಮುಕ್ತವಾಗಿಸಲು ಒಂದು ಮತ್ತು ಎರಡನೇ ಎದುರುದಾರರು ಇಚ್ಛಿಸಿದಲ್ಲಿ, ದಿನಾಂಕ:30–03–2015 ರೊಳಗಾಗಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್‌ನ ಅಮಾನತ್ತು ಖಾತೆಯಲ್ಲಿ ತೊಡಗಿಸಿ, ರಶೀದಿ ಅಥವಾ ಬ್ಯಾಂಕ್‌ನ ಚಲನ್ನಿನ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಲು ಆದೇಶಿಸಲಾಗಿದೆ.

2. ಈ ನ್ಯಾಯಾಲಯವು ದಿನಾಂಕ:21–3–2015 ರಂದು ಹೊರಡಿಸಿದ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವ ಜಪ್ತು ಆದೇಶದ ನೋಟೀಸನ್ನು ಈ ಅದಿಭಾರ ಅರ್ಜಿಯ ಉಭಯ ಪಕ್ಷಕಾರರುಗಳಿಗೆ ಸಾಗರ ಉಪ ವಿಭಾಗದ ಸಹಾಯಕ ನಿಬಂಧಕರ ಕಛೇರಿಯ ಜಾರಿಗಾರರ ಮೂಲಕ ಮುದ್ದಾಂ ಜಾರಿಗೊಳಿಸಿದ್ದು, ಜಾರಿ ಆದ ಬಗ್ಗೆ ಸ್ವೀಕೃತಿ ಕಡತದಲ್ಲಿ ಹಾಜರಿರುತ್ತದೆ.

3. 1ನೇ ಎದುರು ಅರ್ಜಿದಾರರನ್ನು ವಕೀಲರಾದ ಶ್ರೀ ಎಸ್. ರಾಜೀವ್ ರವರು ಪ್ರತಿನಿಧಿಸಿರುತ್ತಾರೆ. 2ನೇ ಎದುರು ಅರ್ಜಿದಾರರನ್ನು ವಕೀಲರಾದ ಶ್ರೀ ಹಾಲಪ್ಪಗೌಡ ರವರು ಪ್ರತಿನಿಧಿಸಿರುತ್ತಾರೆ.

4. 1ನೇ ಎದುರುದಾರರು ದಿನಾಂಕ:9–5–2015 ರಂದು ಸಲ್ಲಿಸಿದ ಲಿಖಿತ ಆಕ್ಷೇಪಣೆಯಲ್ಲಿ ಅವರು ಪಾರ್ಶ್ವವಾಯು ಪೀಡಿತರಾಗಿದ್ದು, ತೀವ್ರವಾಗಿ ಅನಾರೋಗ್ಯದಿಂದ ಬಳಲುತ್ತಿರುವುದಾಗಿ, ಅವಿಭಕ್ತ ಕುಟುಂಬದ ಜವಾಬ್ದಾರಿ ಅವರ ಮೇಲಿದ್ದು, ಅವರ ಹೆಸರಿನಲ್ಲಿರುವ ಆಸ್ತಿಯಿಂದ ಬರುವ ವರಮಾನದಿಂದ ಕುಟುಂಬದ ಜೀವನ ನಿರ್ವಹಣೆ ಮಾಡಬೇಕಿರುತ್ತದೆ. ಸಂಘದಲ್ಲಿ ಅಲ್ಪ ಹಣಕ್ಕೆ ದುಡಿದಿರುತ್ತೇನೆ. ದುರುಪಯೋಗ ಮಾಡದೇ ಇರುವ ಕಾರಣ ಉದ್ದೇಶಿತ ಕ್ರಮವನ್ನು ಜರುಗಿಸದಿರಲು ವಿನಂತಿಸಿಕೊಂಡಿರುತ್ತಾರೆ.

5. ಒಂದನೇ ಎದುರುದಾರ ವಕೀಲರು ಆಕ್ಷೇಪಣೆಯನ್ನು ದಿನಾಂಕ:9–6–2015 ರಂದು ಸಲ್ಲಿಸಿ, ಅದರಲ್ಲಿ ಅರ್ಜಿದಾರರು ತಮ್ಮ ಅರ್ಜಿಯಲ್ಲಿ ಆಪಾದಿಸುವಂತಹ ಯಾವುದೇ ಆಪಾದನೆ/ ಭ್ರಷ್ಟಾಚಾರಗಳನ್ನು ಎಸಗಿರುವುದಿಲ್ಲ. ಅರ್ಜಿದಾರರು ಸಲ್ಲಿಸಿದ ಸ್ವತ್ತುಗಳನ್ನು ಅರ್ಜಿದಾರರಿಗೆ ಒಬ್ಬರಿಗೆ ಹಕ್ಕು ಇರುವುದಿಲ್ಲ. ಸದರೀ ಸ್ವತ್ತುಗಳು ಪಿತ್ರಾರ್ಜಿತವಾಗಿದ್ದು, ಕುಟುಂಬದ ಸದಸ್ಯರೆಲ್ಲರಿಗೂ ಅದರಲ್ಲಿ ಸಮಾನವಾದ ಹಕ್ಕು ಅಧಿಕಾರವಿರುತ್ತದೆ ಮತ್ತು 1ನೇ

ಎದುರುದಾರರು ಪಾರ್ಶ್ವವಾಯು ಪೀಡಿತರಾಗಿದ್ದು, ಅವರು ಆಸ್ಪತ್ರೆಯಲ್ಲಿರುವಾಗ ಇತರೆ ಸಹದ್ಯೋಗಿಗಳು ಇವರ ಸಹಿಗಳನ್ನು ನಕಲು ಸಹಿ ಮಾಡಿ ಹಣ ಪಡೆದು ದುರುಪಯೋಗಪಡಿಸಿಕೊಂಡಿರುತ್ತಾರೆ. ಇದು ಹ್ಯಾಂಡ್‌ರೈಟಿಂಗ್ ಎಕ್ಸ್‌ಪರ್ಟ್ (ನುರಿತ ತಜ್ಞ) ರಿಂದ ದೃಢೀಕರಿಸಲ್ಪಟ್ಟಿದೆ. ಆದಕಾರಣ ಅರ್ಜಿದಾರರ ಅರ್ಜಿಯನ್ನು ವಜಾಗೊಳಿಸಲು ಕೋರಿರುತ್ತಾರೆ ಹಾಗೂ ದಿನಾಂಕ:24–7–2015 ರಂದು ಸಲ್ಲಿಸಿದ ಮೆಮೋದೊಂದಿಗೆ ಎಫ್.ಎಸ್.ಎಲ್. ವರದಿಯ ನಕಲು ಪ್ರತಿ ಹಾಜರುಪಡಿಸಿರುತ್ತಾರೆ.

6. ಎದುರುದಾರರು ಮತ್ತು ಅವರ ವಕೀಲರು ದಿನಾಂಕ:12–5–2015 ರಂದು ಸಲ್ಲಿಸಿರುವ ಆಕ್ಷೇಪಣೆಯಲ್ಲಿ 2ನೇ ಎದುರುದಾರರು ತಾವು ದಿನನಿತ್ಯ ಸಂಗ್ರಹಿಸಿರುವ ಪಿಗ್ಮಿ ಹಣವನ್ನು ಆ ದಿನವೇ 1ನೇ ಎದುರಿ ಕಾರ್ಯದರ್ಶಿಯವರಿಗೆ ಜಮೆ ಮಾಡಲಾಗಿದ್ದು, ಅರ್ಜಿದಾರರ ಆರೋಪಗಳಿಗೆ 1ನೇ ಎದುರುದಾರ ಕಾರ್ಯದರ್ಶಿಯೇ ಸಂಪೂರ್ಣ ಹೊಣೆಗಾರರಾಗಿರುತ್ತಾರೆ. ಮತ್ತು ಅರ್ಜಿದಾರರು ಮಧ್ಯಂತರ ಅರ್ಜಿಯಲ್ಲಿ 2ನೇ ಎದುರುದಾರರ ಸ್ವತ್ತಿನ ವಿವರ ಸಲ್ಲಿಸಿದ್ದು, ಇದರಲ್ಲಿ ಕ್ರಮ ಸಂಖ್ಯೆ 1 ರ ಸ್ವತ್ತು 2 ಎಕರೆ ಸ್ವತ್ತಿಗೆ ಮಾಲೀಕನಾಗಿರುತ್ತೇನೆ. ಉಳಿದ ಸ್ವತ್ತುಗಳು 2ನೇ ಎದುರುದಾರಿಗೆ ಸಂಬಂಧಪಟ್ಟಿರುವುದಿಲ್ಲ. ಈ ಸ್ವತ್ತು 2ನೇ ಎದುರಿಯ ಜೀವನೋಪಾಯಕ್ಕೆ ಅವಶ್ಯವಿದ್ದು, ಸದರೀ ಸ್ವತ್ತನ್ನು ಪರಭಾರೆ ಮಾಡುವ ಪ್ರಶ್ನೆಯು ಬರುವುದಿಲ್ಲ. ಆದಕಾರಣ, ತೀರ್ಪು ಪೂರ್ವ ಜಫ್ತು ಆದೇಶವನ್ನು ರದ್ದುಗೊಳಸಲು ಪ್ರಾರ್ಥಿಸಿದ್ದಾರೆ.

7. ಎರಡನೇ ಎದುರುದಾರರಿಂದ ವಸೂಲಾಗತಕ್ಕ ಮೊಬಲಗಿಗೆ ಅವರ ತಂದೆ ಕೊಲ್ಲಪ್ಪ ಬಿನ್ ದ್ಯಾವಪ್ಪ ಇವರ ಒಟ್ಟು ಕುಟುಂಬದ ಆಸ್ತಿಯನ್ನು ತೀರ್ಪು ಪೂರ್ವ ಜಫ್ತು ಆದೇಶಕ್ಕೆ ಒಳಪಡಿಸಿದ್ದು, ಈ ಆದೇಶದ ನೋಟೀಸನ್ನು ಸದರಿಯವರ ಮೇಲೆ ಜಾರಿ ಮಾಡಿದ್ದು,, ಆದರೆ, ಶ್ರೀಯುತ ಕೊಲ್ಲಪ್ಪನವರು ಯಾವುದೇ ಆಕ್ಷೇಪಣೆ ಸಲ್ಲಿಸಿರುವುದಿಲ್ಲ. ಕಾರಣ ಸದರಿಯವರ ಆಕ್ಷೇಪಣೆ ಇಲ್ಲವೆಂದು ತೀರ್ಮಾನಿಸಲಾಗಿದೆ.

8. ಎದುರುದಾರರಾದ ಒಂದು ಮತ್ತು ಎರಡು ರವರಿಗೆ ವಾದ ಮಂಡನೆಗೆ ಅವಕಾಶ ನೀಡಲಾಗಿದ್ದು, ಉಪಯೋಗಿಸಿಕೊಂಡಿಲ್ಲ. ಆದಕಾರಣ, ಸದರಿಯವರುಗಳ ವಾದ ಮಂಡನೆ ಇರುವುದಿಲ್ಲ ಎಂದು ತೀರ್ಮಾನಿಸಿದೆ. ಅರ್ಜಿದಾರರ ಮೌಖಿಕ ವಾದವನ್ನು ಆಲಿಸಲಾಗಿದೆ.

9. ಅರ್ಜಿದಾರರ ಮಧ್ಯಂತರ ಅರ್ಜಿಯಲ್ಲಿ ಸಲ್ಲಿಸಿದ ಪ್ರಮಾಣ ಪತ್ರ ಹಾಗೂ ಪ್ರಮಾಣ ಪತ್ರದಲ್ಲಿ 1 ಮತ್ತು 2 ಹಾಗೂ 2ನೇ ಎದುರಿಯ ಹೆಸರಿನಲ್ಲಿ ಆಸ್ತಿಗಳು ಇರುವ ಬಗ್ಗೆ ಹಾಜರುಪಡಿಸಿದ ನಗರಸಭಾ ಕಾರ್ಯಾಲಯ, ಸಾಗರ ಇದಕ್ಕೆ ಸಲ್ಲಿಸಿದ ಸ್ವಯಂ ಘೋಷಿತ ಆಸ್ತಿ ತೆರಿಗೆ ವಿವರ ಮತ್ತು ಕೃಷಿ ಭೂ ಹಿಡುವಳಿ ಹೊಂದಿರುವ ಬಗ್ಗೆ ರೆಕಾರ್ಡ್ ಆಫ್ ರೈಟ್ಸ್ ಗೇಣಿ ಮತ್ತು ಪಹಣಿ ಪತ್ರಿಕೆಗಳು ಹಾಗೂ ಕರ ಆಕರಣೆಯ ರಿಜಿಸ್ಟರ್ ಮತ್ತು 2ನೇ ಎದುರುದಾರರು ಸಲ್ಲಿಸಿರುವ ಆಕ್ಷೇಪಣೆ ಮತ್ತು ಹಾಜರುಪಡಿಸಿದ ದಾಖಲಾತಿಗಳನ್ನು ಪರಿಶೀಲಿಸಿ ಪರಿಗಣಿಸಿದೆ. ಅರ್ಜಿದಾರರ ಸಹಕಾರ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, ನಿಯಮಗಳನ್ವಯ ನೋಂದಾಯಿಸಲ್ಪಟ್ಟ ಸಂಸ್ಥೆಯಾಗಿರುತ್ತದೆ. ಸದರೀ ಸಹಕಾರ ಸಂಘದಲ್ಲಿ ಪಿಗ್ಮಿ ವ್ಯವಹಾರಗಳಿಗೆ ಸಂಬಂಧಪಟ್ಟಂತೆ 2011–12 ಮತ್ತು 2012–13 ರಲ್ಲಿ ನಡೆದ ಅವ್ಯವಹಾರಗಳ ಬಗ್ಗೆ ನಡೆದ ಶಾಸನಬದ್ಧ ವಿಚಾರಣೆಯಂತೆ ಎದುರುದಾರರುಗಳು ರೂ.5,13,715/– ಗಳ ಹಣವನ್ನು ದುರುಪಯೋಗಪಡಿಸಿಕೊಂಡಿರುವುದು ಬೆಳಕಿಗೆ ಬಂದಿರುತ್ತದೆ. ಸದರೀ ವರದಿಯ ಮೇಲೆ ಸಕ್ಷಮ ಪ್ರಾಧಿಕಾರ ಕಾಯಿದೆ ಕಲಂ 68 ರಂತೆ ಆದೇಶ ಹೊರಡಿಸಿ, ಎದುರಿಯವರಿಂದ ವಸೂಲಾತಿಗೆ ಆದೇಶಿಸಿದೆ. ಹಾಗೆಯೇ ಅರ್ಜಿದಾರರು ತಂದ ಅದಿಭಾರ ಅರ್ಜಿಯಲ್ಲಿ ಎದುರುದಾರರ ವಿರುದ್ಧ ಆಪಾದನೆ ಪಟ್ಟಿಗಳನ್ನು ಜಾರಿ ಮಾಡಿಸಿ, ವಿಚಾರಣೆ ನಡೆಯುತ್ತಿದೆ ಹಾಗೂ 1 ಮತ್ತು 2ನೇ ಎದುರುದಾರರು ಅನುಕ್ರಮವಾಗಿ ಅರ್ಜಿದಾರ ಸಹಕಾರ ಸಂಘದ ಕಾರ್ಯದರ್ಶಿಯಾಗಿ ಮತ್ತು ಪಿಗ್ಮಿ ಸಂಗ್ರಹಕಾರರಾಗಿ ಕಾರ್ಯನಿರ್ವಹಿಸಿರುವುದು ಇತ್ಯಾದಿ ಸಂಗತಿಗಳನ್ನು ಅದಿಭಾರ ಅರ್ಜಿಯ 1 ಮತ್ತು 2ನೇ ಎದುರುದಾರರು ವಿವಾದಿಸಿರುವುದಿಲ್ಲ. ಅದಲ್ಲದೇ, ಅರ್ಜಿದಾರ ಸಹಕಾರ ಸಂಘದಲ್ಲಿ ಆದ ಹಣ ದುರುಪಯೋಗವನ್ನು ಅಲ್ಲಗಳೆದಿರುವುದಿಲ್ಲ ಮತ್ತು ಈ ದುರುಪಯೋಗಕ್ಕೆ ಒಬ್ಬರು ಮತ್ತೊಬ್ಬರ ಮೇಲೆ ಆಶ್ರಯಿಸಿರುತ್ತಾರೆ. ಇವೆಲ್ಲಾ ಕಾರಣಗಳಿಂದ ಮತ್ತು ಕಾಯಿದೆ ಕಲಂ 64 ರ ವಿಚಾರಣೆ ವರದಿಯಂತೆ ಅರ್ಜಿದಾರ ಸಹಕಾರ ಸಂಘದ ರೂ.5,13,715/– ಗಳ ನಗದು ಹಣವನ್ನು ಎದುರುದಾರರುಗಳು ದುರುಪಯೋಗ ಮಾಡಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಮೇಲಾಗಿ, ಈ ಅದಿಭಾರ ಅರ್ಜಿಯಲ್ಲಿ ಈ ನ್ಯಾಯಾಲಯ ನೀಡಲಿರುವ ತೀರ್ಪನ್ನು ಆಧರಿಸಿ, ಜಫ್ತು ಮಾಡಿದ ಸ್ಥಿರಾಸ್ತಿಗಳನ್ನು ಹೊರತರಲು ಅವಕಾಶವಿರುವ ಕಾರಣ ಎದುರುದಾರರ ಆಕ್ಷೇಪಣೆಗಳು ಪರಿಗಣಾರ್ಹವಲ್ಲ ಎಂದು ತೀರ್ಮಾನಿಸಿದೆ. ಒಂದು ವೇಳೆ, ಅರ್ಜಿದಾರ ಸಹಕಾರ ಸಂಘವು ತನ್ನ ಅರ್ಜಿಯಲ್ಲಿ ಕೋರಿದಂತೆ ಕಾಯಿದೆ ಕಲಂ 103 ರನ್ವಯ ಆದೇಶ ಪೂರ್ವ ಜಫ್ತಿ ಮಾಡುವ ಮೂಲಕ ಜಫ್ತಿ ಮಾಡದೇ ಇದ್ದಲ್ಲಿ ಒಂದು ಮತ್ತು ಎರಡನೇ ಪ್ರತಿವಾದಿ ಯಾವುದೇ ಕ್ಷಣದಲ್ಲಿ ಷೆಡ್ಯೂಲ್ ಆಸ್ತಿಗಳನ್ನು ಮಾರಾಟ ಮಾಡಬಹುದಾಗಿದೆ. ಆದಕಾರಣ, ಈ ನ್ಯಾಯಾಲಯವು ಕಾಯಿದೆ ಕಲಂ 69 ರಂತೆ ಸಲ್ಲಿಸಿರುವ ಅರ್ಜಿಯನ್ನನುಸರಿಸಿ, ನೀಡಬಹುದಾದ ಆದೇಶವನ್ನು ಜಾರಿ ಮಾಡಿ, ಎದುರುಅರ್ಜಿದಾರರುಗಳಿಂದ ಬಡ್ಡಿಯೊಂದಿಗೆ ವಸೂಲು ಮಾಡಿಕೊಳ್ಳಲು ರಹ ಅರ್ಜಿದಾರ ಸಹಕಾರ ಸಂಘಕ್ಕೆ ಇರುವುದಿಲ್ಲವೆಂದು ಕಂಡು ಬರುತ್ತದೆ. ಆದಕಾರಣ, ಕೆಳಗಿನ ಆದೇಶ ಹೊರಡಿಸಲಾಗಿದೆ.

**: ಆ ದೇ ಶ :**

ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 69 ಮತ್ತು ಕಾಯಿದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ139/ಸಿಎಲ್ಎಂ/2010 ದಿನಾಂಕ:17–2–2011 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಈ ನ್ಯಾಯಾಲಯದ ಆದೇಶ ಸಂಖ್ಯೆ:ಡಿಆರ್‌ಎಸ್/ಎಸ್‌ಸಿ–01/ಕಲಂ 103/2014–15 ದಿನಾಂಕ:21–3–2015 ರಂತೆ, ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಫ್ತುಗೊಳಿಸಿ ನೀಡಿದ ಆದೇಶವನ್ನು ಕಾಯಿದೆ ಕಲಂ 103(2) ರನ್ವಯ ಸ್ಥಿರೀಕರಿಸಿ, ಆದೇಶಿಸಿರುತ್ತೇನೆ.

**ಷರತ್ತು ಪೂರ್ವಕ ಜಫ್ತು ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ**

| ಕ್ರ.ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಎಂ.ಆರ್.ನಂ. | ಸ.ನಂ. | ಅಳತೆ ಎ. ಗು. | ಚಕ್ಕುಬಂದಿ |
|---|---|---|---|---|---|---|
| 1 | ಸಿ. ಚಂದ್ರಪ್ಪ, ಬಿನ್ ಬಂಗಾರಪ್ಪ | ಅಣಲೇಕೊಪ್ಪ ಬಡಾವಣೆ, ಸಾಗರ | ಖಾತೆ ಸಂ.1837–1837 | ಐಐಡಿ ನಂ.123 | 40 + (65+70) / 2 =437 ಚದರಡಿಗಳು | ಪೂರ್ವಕ್ಕೆ: ವಿನ್ಸೆಂಟ್<br>ಪಶ್ಚಿಮಕ್ಕೆ:ಆಂತೋನಿ ಮನೆ<br>ಉತ್ತರಕ್ಕೆ: ನಗರಸಭೆ ರಸ್ತೆ<br>ದಕ್ಷಿಣಕ್ಕೆ : ನಗರಸಭೆ ರಸ್ತೆ |

| ಕ್ರ.ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಎಂ.ಆರ್.ನಂ. | ಸ.ನಂ. | ಅಳತೆ ಎ. ಗು. | ಚಕ್ಕುಬಂದಿ |
|---|---|---|---|---|---|---|
| 2 | ಸಿ. ಚಂದ್ರಪ್ಪ, ಬಿನ್ ಬಂಗಾರಪ್ಪ | ಅಣಲೇಕೊಪ್ಪ ಬಡಾವಣೆ, ಸಾಗರ | – | 29 | 39 ಗುಂಟೆ ತರಿ ಜಮೀನು | ಪೂರ್ವಕ್ಕೆ: ರಿ.ಸ.ಸಂ.30 ರ ಜಮೀನು<br>ಪಶ್ಚಿಮಕ್ಕೆ: ರಿ.ಸ.ಸಂ. 27 ಮತ್ತು 28 ರ ಜಮೀನು<br>ಉತ್ತರಕ್ಕೆ: ರಿ.ಸ.ಸಂ.14 ರ ಜಮೀನು<br>ದಕ್ಷಿಣಕ್ಕೆ : ರಿ.ಸ.ಸಂ.3 ರ ಜಮೀನು |
| 3 | ಸಿ. ಚಂದ್ರಪ್ಪ, ಬಿನ್ ಬಂಗಾರಪ್ಪ | ಚಿಕ್ಕಾವಲಿ ಗ್ರಾಮ ಕಸಬಾ ಹೋಬಳಿ, ಸೊರಬ ತಾ: | – | ಸ.ಸಂ. 44 | 36 ಗುಂಟೆ ಖುಷ್ಕಿ ಜಮೀನು | ಪೂರ್ವಕ್ಕೆ: ರಿ.ಸ.ಸಂ.45ರ ಜಮೀನು<br>ಪಶ್ಚಿಮಕ್ಕೆ:ರಿ.ಸ.ಸಂ.43ರ ಜಮೀನು<br>ಉತ್ತರಕ್ಕೆ: ರಿ.ಸ.ಸಂ.39ರ ಜಮೀನು<br>ದಕ್ಷಿಣಕ್ಕೆ : ರಿ.ಸ.ಸಂ.46ರ ಜಮೀನು |
| 4 | ಸಿ. ಚಂದ್ರಪ್ಪ, ಬಿನ್ ಬಂಗಾರಪ್ಪ | ಚಿಕ್ಕಾವಲಿ ಗ್ರಾಮ ಕಸಬಾ ಹೋಬಳಿ, ಸೊರಬ ತಾ: | – | 44/2 | 01 ಎಕರೆ 06 ಗುಂಟೆ ಖುಷ್ಕಿ ಜಮೀನು | ಪೂರ್ವಕ್ಕೆ: ರಿ.ಸ.ಸಂ.45ರ ಜಮೀನು<br>ಪಶ್ಚಿಮಕ್ಕೆ:ರಿ.ಸ.ಸಂ.43ರ ಜಮೀನು<br>ಉತ್ತರಕ್ಕೆ: ರಿ.ಸ.ಸಂ.39ರ ಜಮೀನು<br>ದಕ್ಷಿಣಕ್ಕೆ : ರಿ.ಸ.ಸಂ.46ರ ಜಮೀನು |
| 5 | ಸಿ. ಚಂದ್ರಪ್ಪ, ಬಿನ್ ಬಂಗಾರಪ್ಪ | ಚಿಕ್ಕಾವಲಿ ಗ್ರಾಮ ಕಸಬಾ ಹೋಬಳಿ, ಸೊರಬ ತಾ: | – | 44/1 | 01 ಎಕರೆ 01 ಗುಂಟೆ ತರಿ ಜಮೀನು | ಪೂರ್ವಕ್ಕೆ: ರಿ.ಸ.ಸಂ.45ರ ಜಮೀನು<br>ಪಶ್ಚಿಮಕ್ಕೆ: ರಿ.ಸ.ಸಂ.43ರ ಜಮೀನು<br>ಉತ್ತರಕ್ಕೆ: ರಿ.ಸ.ಸಂ.39ರ ಜಮೀನು<br>ದಕ್ಷಿಣಕ್ಕೆ : ರಿ.ಸ.ಸಂ. 46ರ ಜಮೀನು |
| 6 | ರಾಮಪ್ಪ, ಬಿನ್ ಕೊಲ್ಲಪ್ | ಯಲಸಿ ಗ್ರಾಮ, ಕಸಬಾ ಹೋಬಳಿ, ಸೊರಬ ತಾ: | – | 122 | 2 ಎಕರೆ ಜಮೀನು | ಪೂರ್ವಕ್ಕೆ: ಸ.ಸಂ.122 ರಲ್ಲಿ ಉಳಿದ ಜಾಗ<br>ಪಶ್ಚಿಮಕ್ಕೆ: ಸ.ಸಂ.122 ರಲ್ಲಿ ಉಳಿದ ಜಾಗ<br>ಉತ್ತರಕ್ಕೆ: ಸ.ಸಂ.122 ರಲ್ಲಿ ಉಳಿದ ಜಾಗ<br>ದಕ್ಷಿಣಕ್ಕೆ : ಸ.ಸಂ.122 ರಲ್ಲಿ ಉಳಿಕೆ ಜಾಗ |
| 7 | ಕೊಲ್ಲಪ್ಪ ಬಿನ್ ದ್ಯಾಮಪ್ಪ 2ನೇ ಎದುರಿಯ ತಂದೆ | ಯಲಸಿ ಗ್ರಾಮ, ಕಸಬಾ ಹೋಬಳಿ, ಸೊರಬ ತಾ: | – | ಸ.ಸಂ. 234 | 02 ಎಕರೆ 16 ಗುಂಟೆ | ಪೂರ್ವಕ್ಕೆ: ರಿ.ಸ.ಸಂ.141<br>ಪಶ್ಚಿಮಕ್ಕೆ: ರಿ.ಸ.ಸಂ 119<br>ಉತ್ತರಕ್ಕೆ: ರಿ.ಸ.ಸಂ120<br>ದಕ್ಷಿಣಕ್ಕೆ : ರಿ.ಸ.ಸಂ 118 ಮತ್ತು 119 |
| 8 | ಕೊಲ್ಲಪ್ಪ ಬಿನ್ ದ್ಯಾಮಪ್ಪ 2ನೇ ಎದುರಿಯ ತಂದೆ | ಯಲಸಿ ಗ್ರಾಮ, ಕಸಬಾ ಹೋಬಳಿ, ಸೊರಬ ತಾ: | – | 189/1 | 02 ಗುಂಟೆ ತರಿ ಜಮೀನು | ಪೂರ್ವಕ್ಕೆ: ರಿ.ಸ.ಸಂ. 188<br>ಪಶ್ಚಿಮಕ್ಕೆ: ರಿ.ಸ.ಸಂ. 190<br>ಉತ್ತರಕ್ಕೆ: ರಿ.ಸ.ಸಂ.228<br>ದಕ್ಷಿಣಕ್ಕೆ : ರಿ.ಸ.ಸಂ.183 |
| 9 | ಕೊಲ್ಲಪ್ಪ ಬಿನ್ ದ್ಯಾಮಪ್ಪ, 2ನೇ ಎದುರಿಯ ತಂದೆ | ಹಳೇ ಸೊರಬ ಹೊಸಪೇಟೆ ಬಡಾವಣೆ, ಸೊರಬ | – | ಖಾತೆ ಸಂ.17 | ನಿವೇಶನ ಮತ್ತು ಮನೆ | ಪೂರ್ವಕ್ಕೆ: ವೀರಪ್ಪ ಮಡಿವಾಳರ ಮನೆ<br>ಪಶ್ಚಿಮಕ್ಕೆ: ರಾಜುಗೌಡರ ಮನೆ<br>ಉತ್ತರಕ್ಕೆ: ಟಿ.ಎ.ಪಿ.ಸಿ.ಎಂ.ಎಸ್.,<br>ದಕ್ಷಿಣಕ್ಕೆ : ಸಾರ್ವಜನಿಕ ರಸ್ತೆ. |

ಈ ಆದೇಶವನ್ನು ನನ್ನ ಸಹಿ ಮತ್ತು ನ್ಯಾಯಾಲಯದ ಮೊಹರಿನೊಂದಿಗೆ ಈ ದಿನ ಅಂದರೆ, ದಿನಾಂಕ:29-09-2015 ರಂದು ಹೊರಡಿಸಿರುತ್ತೇನೆ.

**ಎ.ಎಸ್. ಜಯಪ್ಪ**
ಸಹಕಾರ ಸಂಘಗಳ ಉಪನಿಬಂಧಕರು
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**PR. 975**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂ:ನಅಇ 262 ಬೆಂರೂಪ್ರಾ 2015, ಬೆಂಗಳೂರು, ದಿನಾಂಕ : 27–11–2015.**

ಸರ್ಕಾರದ ಅಧಿಸೂಚನೆ ಸಂಖ್ಯೆ : ನಅಇ 20 ಬೆಂರೂಪ್ರಾ 2009, ದಿನಾಂಕ : 22–05–2010ರಲ್ಲಿ ಸ್ಥಳೀಯ ಯೋಜನಾ ಪ್ರದೇಶವನ್ನು ಪರಿಷ್ಕರಿಸಿ, ಶಿವಮೊಗ್ಗ–ಭದ್ರಾವತಿ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ. ಆದುದರಿಂದ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದ ಹೆಸರನ್ನು ಸ್ಥಳೀಯ ಯೋಜನಾ ಪ್ರದೇಶದನ್ವಯ "ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ" ಎಂಬುದರ ಬದಲಾಗಿ "ಶಿವಮೊಗ್ಗ–ಭದ್ರಾವತಿ ನಗರಾಭಿವೃದ್ಧಿ ಪ್ರಾಧಿಕಾರ", ಶಿವಮೊಗ್ಗ ಎಂದು ಶಿರೋನಾಮೆ ಬದಲಾಯಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ವಿ. ರಾಜೇಂದ್ರ
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**PR. - 1044**
**SC. – 100+50**

## ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ (ನಿ.441) ಕ.ರಾಸ. ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು.

### ದಾವಾ ಸಂಖ್ಯೆ: ಜೆಆರ್‌ಡಿ/ಎಎಕ್ಸ್‌ಬಿ/112/2014–15

**ವಾದಿ**

ಶಾಖಾ ವ್ಯವಸ್ಥಾಪಕರು,
ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ.,
ಕೆಂಗೇರಿ ಶಾಖೆ, ಬೆಂಗಳೂರು.

**ಪ್ರತಿವಾದಿಗಳು**

1. ಲಲಿತಾ ಎಸ್ ಕೋಂ ಎಂ.ಸಿ.ಮುನಿರಾಜು,
ನಂ.10/1, "ಮಹಿಮಾ ನಿಲಯ" 100 ಅಡಿ ರಸ್ತೆ,
ನೇತಾಜಿನಗರ, ಜಾಲಹಳ್ಳಿ ಕ್ರಾಸ್, ಬೆಂಗಳೂರು–57
2. ಎಂ.ಸಿ.ಮುನಿರಾಜು ಬಿನ್ ಎಂ.ಮಹಿಮಪ್ಪ
ನಂ:10/1,"ಮಹಿಮಾ ನಿಲಯ" 100 ಅಡಿ ರಸ್ತೆ,
ನೇತಾಜಿನಗರ, ಜಾಲಹಳ್ಳಿ ಕ್ರಾಸ್, ಬೆಂಗಳೂರು–57.
3. ಎಂ.ಕದಿರೇಶ್ ಬಿನ್ ಎಂ.ಮುನಿಮಾರಪ್ಪ,
ನಂ: 118/10, ನ್ಯೂ ನಂ:651, 1ನೇ ಕ್ರಾಸ್,
ನೇತಾಜಿನಗರ, ಜಾಲಹಳ್ಳಿ ಕ್ರಾಸ್, 100 ಅಡಿ ರಸ್ತೆ,
ಚೊಕ್ಕಸಂದ್ರ ದಾಸರಹಳ್ಳಿ, ಬೆಂಗಳೂರು–57.

### ತೀರ್ಪು ಪೂರ್ವ ಜಪ್ತಿ ಸ್ಥಿರೀಕರಣಾದೇಶ

ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 70ರ ಪ್ರಕಾರ ವಾದಿಯು ದಾವಾ ಸಂಖ್ಯೆ: ಜೆಆರ್‌ಡಿ/ಎಎಕ್ಸ್‌ಬಿ/112/2014–15 ಅನ್ನು ದಾಖಲಿಸಿದ್ದು, ಪ್ರತಿವಾದಿಗಳಿಂದ ದಿನಾಂಕ: 12–12–2014ಕ್ಕೆ ಇದ್ದಂತೆ ರೂ.10,42,209/–ಗಳನ್ನು ಹಾಗೂ ಅಸಲಿನ ಮೇಲೆ ಶೇಕಡ 14ರ ಹಾಗೂ 2ರ ದಂಡ ಬಡ್ಡಿಯೊಂದಿಗೆ ವಸೂಲಿ ಮಾಡಿಕೊಳ್ಳಲು ಡಿಕ್ರಿ ನೀಡಲು ಕೋರಿ ದಾವೆ ಹೂಡಿರುತ್ತಾರೆ. ಸದರಿ ದಾವೆಯನ್ನು ಕಡತಕ್ಕೆ ತೆಗೆದುಕೊಂಡು ವಿಚಾರಣೆ ಪ್ರಗತಿಯಲ್ಲಿರುವ ಈ ಸಂದರ್ಭದಲ್ಲಿ ವಾದಿಯು ಮಧ್ಯಂತರ ಅರ್ಜಿ ಸಲ್ಲಿಸಿ ಅದರೊಂದಿಗೆ ಪ್ರತಿವಾದಿ–1ರವರ ಅಡಮಾನವಾಗದಿರುವ ಸ್ವತ್ತಿನ ದಾಖಲಾತಿಗಳನ್ನು ಸಲ್ಲಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 103ರಡಿ ತೀರ್ಪು ಪೂರ್ವ ಜಪ್ತಿ ಆದೇಶವನ್ನು ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಅರ್ಜಿದಾರರ ಪರವಾಗಿ ವಕೀಲರಾದ ಶ್ರೀ ಹೆಚ್.ಎನ್. ಸುನೀಲ್ ಕುಮಾರ್ ವಕಾಲತ್ತು ಸಲ್ಲಿಸಿ ವಾದಿಯನ್ನು ಪ್ರತಿನಿಧಿಸಿರುತ್ತಾರೆ. ವಾದಿಯು ದಿನಾಂಕ: 17–03–2015ರಂದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103, r/w order 38 rule of 5 of CPCಯಡಿ ಅರ್ಜಿ ಸಲ್ಲಿಸಿ, ಒಂದನೇ ಪ್ರತಿವಾದಿಯವರು ಪಡೆದ ಸಾಲಕ್ಕೆ ಅಡಮಾನ ಮಾಡಿದ್ದ ಸ್ಥಿರಾಸ್ತಿಯನ್ನು ಬಿಬಿಎಂಪಿಯು ನೆಲಸಮ ಮಾಡಿ ರಾಜಕಾಲುವೆಯ ಭಾಗವೆಂದು ಆ ಜಾಗವನ್ನು ಸ್ವಾಧೀನ ಪಡಿಸಿಕೊಂಡಿರುವುದರಿಂದ, ಪ್ರಸ್ತುತ ದಾವೆಯಲ್ಲಿ ವಾದಿಯವರು ಡಿಕ್ರಿ ಪಡೆದರೂ ಅಡಮಾನ ಮಾಡಿರುವ ಸ್ಥಿರಾಸ್ತಿಯು ಲಭ್ಯವಿಲ್ಲದಂತಾಗುವ ಕಾರಣ ಹಾಗೂ ಒಂದೊಮ್ಮೆ ಪ್ರಸಕ್ತ ನೀಡಲಾಗುತ್ತಿರುವ ಸ್ವತ್ತನ್ನು ಪ್ರತಿವಾದಿಯವರು ಪರಭಾರೆ ಮಾಡಿದಲ್ಲಿ ಈ ದಾವೆಯಲ್ಲಿ ಪಡೆಯಲಾಗುವ ಡಿಕ್ರಿಯನ್ನು ಜಾರಿಗೊಳಿಸಲು ಮಾರ್ಗವಿಲ್ಲದಂತಾಗುವುದರ ಜೊತೆಗೆ ಹಣ ವಸೂಲಿಗೆ ರಹವಿಲ್ಲದಂತಾಗುತ್ತದೆಂದೂ ತನ್ಮೂಲಕ ಬ್ಯಾಂಕಿಗೆ ಅಪಾರ ನಷ್ಟವುಂಟಾಗುತ್ತದೆಂದೂ ಒತ್ತಿಹೇಳಿ ಈ ಬಗ್ಗೆ ಪ್ರತಿವಾದಿ–1ರವರ ಷಡ್ಯೂಲ್ ಸ್ವತ್ತುಗಳ ವಿವರಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ ತೀರ್ಪುಪೂರ್ವ ಜಪ್ತಿ ಆದೇಶವನ್ನು ನೀಡುವಂತೆ ಅರ್ಜಿದಾರ ಪರ ವಕೀಲರು ಕೋರಿದ್ದುದನ್ನಾಧರಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103ರಡಿ ಸಲ್ಲಿಸಿರುವ ಅರ್ಜಿಯನ್ನು ಪುರಸ್ಕರಿಸಿ, ಪ್ರತಿವಾದಿ–1ರವರು ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ಯಾರಿಗೂ ಪರಭಾರೆ ಮತ್ತು ಋಣಭಾರವನ್ನು ಮಾಡದಂತೆ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರಡಿ ಷರತ್ತಿಗೊಳಪಟ್ಟು ತೀರ್ಪುಪೂರ್ವ ಜಪ್ತಿ ಆದೇಶದ ನೋಟೀಸನ್ನು ನೀಡಲಾಗಿತ್ತು. ಸದರಿ ತೀರ್ಪು ಪೂರ್ವ ಜಪ್ತಿ ಆದೇಶವನ್ನು ತೆರವುಗೊಳಿಸಲು ಪ್ರತಿವಾದಿಗಳು ಇಚ್ಛಿಸಿದಲ್ಲಿ **ದಿನಾಂಕ: 12–12–2014ಕ್ಕೆ ಬಾಕಿಯಿರುವ ರೂ. 10,42,209/–** (ರೂ.ಹತ್ತು ಲಕ್ಷದ ನಲವತ್ತೆರಡು ಸಾವಿರದ ಎರಡು ನೂರಾ ಒಂಭತ್ತು ಮಾತ್ರ)ಗಳನ್ನು ಹಾಗೂ ತದನಂತರದ ಅವಧಿಗೆ ಅಸಲಿನ ಮೇಲೆ ಶೇ. 14ರ ಹಾಗೂ 2ರ ದಂಡ ಬಡ್ಡಿಯ ಮೊಬಲಗನ್ನು ವಾದಿ ಸಂಸ್ಥೆಯಲ್ಲಿ ವಾದಿಯ ಹೆಸರಿನಲ್ಲಿ ಠೇವಣಿ ಮಾಡಿ, ಠೇವಣಿ ಮಾಡಿದ ಬಗ್ಗೆ ದಾಖಲೆಗಳನ್ನು ಈ ನ್ಯಾಯಾಲಯದ ತೀರ್ಪುಪೂರ್ವ ಜಪ್ತಿ ಆದೇಶದ ನೋಟೀಸು ತಲುಪಿದ 30 ದಿವಸಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಸೂಚಿಸಿ, ಒಂದೊಮ್ಮೆ ಬಾಕಿ ಮೊಬಲಗನ್ನು ಜಮಾ ಮಾಡಲು ತಪ್ಪಿದಲ್ಲಿ, ಏಕೆ

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಸದರಿ ತೀರ್ಪುಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಣ ಮಾಡಬಾರದೆಂದು ನೋಟೀಸು ನೀಡಲಾಗಿತ್ತು. ಸದರಿ ನೋಟೀಸಿನಲ್ಲಿ ನಿಗದಿ ಪಡಿಸಿದ ಗಡುವು ಮುಗಿದಿದ್ದು, ಇದಕ್ಕೆ ಪ್ರತಿವಾದಿಯವರಿಂದ ಯಾವುದೇ ಪ್ರತಿಕ್ರಿಯೆಯಾಗಲೀ, ಆಕ್ಷೇಪಣೆಯಾಗಲೀ ಸ್ವೀಕೃತವಾಗಿಲ್ಲದ ಹಿನ್ನೆಲೆಯಲ್ಲಿ ಸದರಿ ನಿಬಂಧನಾತ್ಮಕ ಜಪ್ತಿ ಪೂರ್ವ ಆದೇಶವನ್ನು ಸ್ಥಿರೀಕರಿಸುವುದು ಸೂಕ್ತವೆಂದು ಮನಗಂಡು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103ರಡಿ ಸಲ್ಲಿಸಿರುವ ಅರ್ಜಿಯನ್ನು ಪುರಸ್ಕರಿಸಿ, ಈ ಹಿಂದೆ ಹೊರಡಿಸಲಾಗಿದ್ದ ನಿಬಂಧನಾತ್ಮಕ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಿದೆ.

**ಸ್ವತ್ತಿನ ವಿವರ**

All that piece and parcel of the property bearing Nos.8 & 9, Khata No. 910, portion of property bearing Assessment No. 10/2, situated at CHOKKASANDRA VILLAGE, Yeshwanthapura Hobli, Bengaluru North Taluk, Dasarahalli C.M.C. Ward No. 20, presently under the limits of Bruhath Bengaluru Mahanagara Palike, measuring East to West: Northern side 44' (Forty Four Feet), Southern side 45' (Forty Five Feet) and North to South: 50' (Fifty Feet), along with One square A.C.Sheet roofed residential house, with red oxide flooring, cement and bricks used for construction of walls, jungle wood used for preparation of doors and windows, with Electricity facility only and bounded as follows:-

| | |
|---|---|
| **East By :** | Property belongs to Mr.Dodamahimappa, |
| **West by :** | 20 feet wide Road, |
| **North by :** | Site No. 7, |
| **South by :** | Site No. 10 |

ದಿನಾಂಕ: 18-08-2015 ರಂದು ನ್ಯಾಯಾಲಯದ ಮೊಹರಿನೊಂದಿಗೆ ಕೊಡಲ್ಪಟ್ಟಿದೆ.

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441)**
**ದಾವಾ ಪಂಚಾಯ್ತಿ ನ್ಯಾಯಾಲಯ**
**ಕ.ರಾ.ಸ. ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು-18**

**PD-73**
**SC-05**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59